# ಮಂಛಾವತಾರ

ಸಾಮಾಜಿಕ ನಾಟಕ



ಎಂ. ಜೀವನ



ದೌಲತ ಪ್ರಕಾಶನ ಹುಬ್ಬಳ್ಳಿ.

ಸಂಪಾದಕರು "ಪ್ರಭಾತ" ಇವರಿಗೆ -
[illegible]
— ಎಂ. ಜೀವನ

# ಮಂಜಾವತಾರ

ಸಾಮಾಜಿಕ ನಾಟಕ



ಎಂ. ಜೀವನ



ದೌಲತ ಪ್ರಕಾಶನ ಹುಬ್ಬಳ್ಳಿ.

ಮುದ್ರಕರು :
ಲಿಬರ್ಟಿ ಪ್ರಿಂಟರ್ಸ
ಕಲಾದಗಿಓಣಿ (ಬ್ರಾಡ್ವೆ) ಹುಬ್ಬಳ್ಳಿ.

ಮೊದಲ ಮುದ್ರಣ
೨೪—೫—೧೯೬೫



ಬೆಲೆ : ೨—೫೦ ಪೈಸೆ

ಪ್ರಕಾಶನ :
ದೌಲತ್ ಪ್ರಕಾಶನ,
(ಸಿಟಿ ಪೋಸ್ಟ ಆಫೀಸ ಹತ್ತಿರ)
ಬ್ರಾಡವೇ, ಹುಬ್ಬಳ್ಳಿ.

# ಮೊದಲ ಮಾತು

ಯಾವುದೊಂದು ಸಾಮಾಜಿಕ ಚಿತ್ರವನ್ನು ನೋಡಿಯೋ ಇಲ್ಲವೆ ಕನ್ನಡ ಕಾದಂಬರಿಯನ್ನು ಓದಿಯೋ ಒಂದು ನಾಟಕ ಬರೆದು ಅದಕ್ಕೆ ಮೂರು ಹೆಸರಿಟ್ಟು ನಾಲ್ಕು ಕಂಪನಿಯವರಿಗೆ ಆಡಲು ಕೊಡುವಂತಹ ನಾಟಕಕಾರರು ಕನ್ನಡನಾಡಿನಲ್ಲಿ ಹೆಚ್ಚಾಗಿರುವ ಈ ಸಮಯದಲ್ಲಿ ನಾನೂ ಒಂದು ನಾಟಕ ಬರೆಯುವ ಸಾಹಸಮಾಡಿದೆ. "ಬ್ರಾಹ್ಮಣ ಕಾಂಗ್ರೆಸ್ಸು" ಕಾದಂಬರಿಯನ್ನು ಬರೆದ ನಂತರ ಅದರ ಮುನ್ನುಡಿಯಲ್ಲಿ ಹೇಳಿದಂತೆ "ತಾಳಿ ಕಟ್ಟಿದ ಗಂಡ" ಕಾದಂಬರಿಯ ವಿಷಯವು ತಲೆಯೊಳಗಿರುವಾಗ ದೊಡ್ಡವಾಡದ ಶ್ರೀ ಶಾಂತೇಶ್ವರ ನಾಟ್ಯ ಸಂಘದವರು ನಾಟಕ ಬರೆದುಕೊಡಲು ಆಗ್ರಹಪಡಿಸಿದರು. ನಾನು ಬರದಂತೆ ಆಡಬೇಕೆಂದು ಕರಾರು ಮಾಡಿ ಬರೆಯಲು ಪ್ರಾರಂಭಿಸಿದೆ. ಎಂಟು ದಿವಸಗಳಲ್ಲಿ ಬರೆಯುವದು ಮುಗಿಯಿತು. ಒಂಭತ್ತನೆಯ ದಿವಸವೇ (೨೬–೧–೧೯೬೪) ಧಾರವಾಡದಲ್ಲಿ ಇದನ್ನು ಆಡಿದರು.

ಪುಸ್ತಕದ ಭಾಷೆಯ ಸಂಭಾಷಣೆಗಳುಳ್ಳ ನಾಟಕಗಳನ್ನು ಆಡಿಯೇ ಅಭ್ಯಾಸವಿದ್ದ ದೊಡ್ಡವಾಡ ಕಂಪನಿಯವರು (ಬಹುಶಃ ಎಲ್ಲ ಕಂಪನಿಯವರೂ ಅಂತಹ ನಾಟಕಗಳನ್ನೇ ಆಡುತ್ತಾರೆ. ಉತ್ತರ ಕರ್ನಾಟಕದಲ್ಲಿ ಏಣಗಿ ಬಾಳಪ್ಪನವರಂಥ ಒಬ್ಬಿಬ್ಬರು ಈ ಮಾತಿಗೆ ಅಪವಾದವಾಗಿರಬಹುದು.) ಸ್ವಾಭಾವಿಕ ಭಾಷೆಯ ಈ ನಾಟಕವನ್ನು ಆಡಲು ಮುಗ್ಗರಿಸಿದರೆಂದೇ ಹೇಳಬೇಕು. ಅದಕ್ಕಾಗಿ ಅವರಿಗೆ ಮುಂದೆ ಆಡಕೂಡದೆಂದು ನಿಷ್ಠುರವಾಗಿ ಹೇಳಬೇಕಾಯಿತು. ಇದರಲ್ಲಿ ಅವರದೂ ತಪ್ಪಿಲ್ಲ. ಏಕೆಂದರೆ ಸ್ವಾಭಾವಿಕ ಭಾಷೆಯಾವುದು, ಗ್ರಾಮ್ಯಭಾಷೆಯಾವುದು, ಎಂಬುದು ನಾಟಕಕಾರರಿಗೇ ಅರ್ಥಾತ್ ನಾಟಕ ಕಂಪನಿಯವರ ಭಾಹೆಯಲ್ಲಿ ಹೇಳಬೇಕೆಂದರ 'ಕವಿ'ಗಳಿಗೇಗೊತ್ತಿಲ್ಲದಾಗ ಕಂಪನಿಯವರಿಗೆ ಹೇಗೆ ಗೊತ್ತಾಗಬೇಕು? ಅನುಮಪ್ಪನಕ ಹಗ್ಗಾ ಶಿನ್ನೂಪಾಗ ಪೂಜಾರೆಪ್ಪನ್ನತ್ರ, ಶ್ಯಾವಿಗಿ ಬೇಡಿದರ ಹ್ಯಾಂಗ ಸಿಗಬೇಕು?

ಬಂಗಾಲ ಹಾಗು ಮಹಾರಾಷ್ಟ್ರಗಳಲ್ಲಿಯ ನಾಟಕಗಳನ್ನು ನೋಡಿದವರು ನಮ್ಮಲ್ಲಿಯ ಪರ್ವಿಸ ಕಂಪನಿಗಳ ನಾಟಕಗಳನ್ನು ನೋಡಿದಾಗ ಭೂ–ವ್ಯಾಕಾಶಗಳಷ್ಟು ಅಂತರವನ್ನು ಕಾಣುತ್ತಾರೆ. ಹೀಗಾಗಿ ಬುದ್ಧಿವಂತರು ನಾಟಕನೋಡುವುದನ್ನೇ ಬಿಟ್ಟಿದ್ದಾರೆ. ಕಂಪನಿಯವರು ಕೂಡ "ಎಂಟಾಣಿಯವರು ಬಂದರೆ ಸಾಕು" ಎಂದುಕೊಂಡು ಅಂಥ ನಾಟಕಗಳನ್ನೇ ಪ್ರದರ್ಶಿಸಿ ಭಾರೀ ಯಶಸ್ಸುಗಳಿಸಿದವರಂತೆ ತಮ್ಮ ಬೆನ್ನು ತಾವೇ ಚಪ್ಪರಿಸಿಕೊಳ್ಳುತ್ತಿದ್ದಾರೆ ಬುದ್ಧಿವಂತರಿಗೂ ಟಿಕೀಟು ತೆಗೆಸಿ ನಾಟಕ ನೋಡಬೇಕು ಎಂಬ ಹಂಬಲವನ್ನು ಹುಟ್ಟಿಸುವ ಒಳ್ಳೆಯ ನಾಟಕಗಳನ್ನು ಪ್ರದರ್ಶಿಸುವದು ನಮ್ಮಲ್ಲಿಯ ಕಂಪನಿಯವರಿಗೆ ಗೊತ್ತೇ ಇಲ್ಲ; ಪಾಪ, ಅವರಾದರೂ ಏನು ಮಾಡಿಯಾರು? ಅವರಿಗೆ ನಾಟಕಗಳನ್ನು ಸಪ್ಲಾಯ್ ಮಾಡುವ ನಾಟಕಕಾರರೇ "ಎಂಟಾಣಿಯವರು ನೋಡಿದರೆ ಸಾಕು" ಎಂದು ಹೇಳಿಕೊಂಡು ತಮ್ಮ 'ಕ್ಲಾಸನ್ನು' ತಾವೇ ಬಹಿರಂಗಪಡಿಸಿದ್ದಾರೆ, ಪಡಿಸುತ್ತಿದ್ದಾರೆ. ಅಂದಾಗ ಯಾರೇನು ಮಾಡಲು ಸಾಧ್ಯ?

ನಮ್ಮಲ್ಲಿ ಪ್ರತಿಭಾವಂತ ನಾಟಕಕಾರರಿಗೇನೂ ಕೊರತೆಯಿಲ್ಲ. ಹಗಲು–ರಾತ್ರಿ ರಂಗಭೂಮಿಯ ಏಳಿಗೆಯ ಬಗೆಗೆ ಚಿಂತಿಸುವ, ರಂಗಭೂಮಿಯ ಮೇಲೆ ನಾನಾ ಬಗೆಯ ಹೊಸ ತಂತ್ರಗಳನ್ನು ತೋರಿಸಬೇಕೆನ್ನುವ ಶ್ರೀ ಶ್ರೀರಂಗರ ನಾಟಕಗಳನ್ನು ಎಷ್ಟು ಕಂಪನಿಯವರು ಆಡಿದ್ದಾರೆ? ಶ್ರೀ. ಬಸವರಾಜ ಕಟ್ಟೀಮನಿಯವರ "ಪಟ್ಟಣದ ಹುಡುಗಿ"ಯ ಗತಿಯೇನಾಯಿತು? ಅದೇ ರೀತಿಯಾಗಿ ಶ್ರೀಗಳಾದ ಎಕ್ಕಿ, ಪರ್ವತವಾಣಿ ಹಾಗು ಮೈಸೂರಿನ ಸ್ವಾಮಿ ಮಹಾಮನೆಯಂಥವರ ವಿಚಾರಪೂರಿತ ನಾಟಕಗಳನ್ನು ಎಷ್ಟು ಜನರು ಆಡಿದ್ದಾರೆ? ಪರ್ವಿಸ ಕಂಪನಿಯವರು ಅಡ್ಡದಾರಿ ಹಿಡಿದಿದ್ದರೂ ಬುದ್ಧಿವಂತ ಕಲಾವಿಲಾಸಿಗಳು ಮಾತ್ರ ಮೇಲ್ಕಾಣಿಸಿದವರ ನಾಟಕಗಳನ್ನು ಆಗಾಗ ಪ್ರದರ್ಶಿಸುತ್ತಿರುವುದು ಸಮಾಧಾನದ ಸಂಗತಿಯಾಗಿದೆ. ಮತ್ತು ನಮ್ಮ ರಂಗಭೂಮಿ ಹಾಗು ನಾಟಕಗಳು ಸತ್ತಿಲ್ಲ ಎಂದು ಸಾಕ್ಷಿ ಹೇಳುವಂತಾಗಿದೆ ಅಪರೂಪಕ್ಕೊಮ್ಮೆ ಪ್ರದರ್ಶಿಸಲ್ಪಡುತ್ತಿರುವ ಇಂಥವರ ನಾಟಕಗಳನ್ನು ನೋಡಿಯೇ ನಾಟ್ಯಕಲೆಯ ಅಭಿವೃದ್ಧಿಯನ್ನು ಬಯಸುವವರು ಸಮಾಧಾನ ಪಡಬೇಕಾಗಿದೆ.

ಮೈಸೂರಿನ ಹಿರಣ್ಣಯ್ಯ ಮಿತ್ರಮಂಡಳಿಯವರು ಅಂತಹ ನಾಟಕಗಳನ್ನು ಅಭಿನಯಿಸುತ್ತಾರಾದರೂ ಅವರ ನಾಟಕಗಳು ಬಹುತರವಾಗಿ "ಒನ್ ಮ್ಯಾನ್ ಪ್ಲೇ" ಆಗಿವೆಯೆಂದು ವಿಷಾದದಿಂದ ಹೇಳಬೇಕಾಗಿದೆ. ಹೀಗೆ ಒಂದಿಲ್ಲೊಂದು ರೀತಿಯಿಂದ ನಮ್ಮ ರಂಗಭೂಮಿಯು ದುರ್ಬಲವಾಗುತ್ತ ನಡೆದಿದೆ. ಇನ್ನು 'ಮಂಚಾವತಾರ' ನಾಟಕದ ವಿಷಯ; ಇದರ ಬಗ್ಗೆ ನಾನೇನನ್ನೂ ಹೇಳಲಾರೆ. ಆ ಮಾತನ್ನು ಓದುಗರು ಮತ್ತು ವಿಮರ್ಶಕರು ಹೇಳಬೇಕು. ನಿರ್ದಾಕ್ಷಿಣ್ಯ ವಿಮರ್ಶೆ ಹಾಗು ಸಲಹೆಗಳನ್ನು ನಾನು ಸದಾ ಸ್ವಾಗತಿಸುತ್ತೇನೆ. ಆದರೆ ನಾಂದಿಗೀತೆ "ಶ್ರೀ" ಯವರದೆಂದು ನಾನು ಹೇಳಬೇಕಾಗಿಲ್ಲ.

'ಬ್ರಾಹ್ಮಣ ಕಾಂಗ್ರೆಸ್ಸು' ಕಾದಂಬರಿಯು ಪ್ರಕಟವಾದ ಹದಿನೇಳು ತಿಂಗಳುಗಳ ನಂತರ 'ಮಂಚಾವತಾರ'ವು ಪ್ರಕಟವಾಗುತ್ತಿದೆ. ಈ ಮಧ್ಯದ ದೀರ್ಘಾವಧಿಯಲ್ಲಿ ಅನಾರೋಗ್ಯದಿಂದ ಸಾಕಷ್ಟು ಬಳಲಿದ್ದೇನೆ. ಹಾಗೆನ್ನುವುದಕ್ಕಿಂತ ಮೃತ್ಯುವಿನೊಂದಿಗ ಹೋರಾಡಿದೆನೆಂದು ಹೇಳುವುದು ಸೂಕ್ತವಾದೀತು. ಅದಕ್ಕಾಗಿಯೇ ಇಷ್ಟೊಂದು ವಿಲಂಬವಾಗಿದೆ. ಪ್ರಸ್ತುತ ನಾಟಕವು ಬೆಳಕಿಗೆ ಬರಲು ಕಾರಣರಾದ ದೌಲತ್ ಪ್ರಕಾಶನದ ಸಂಚಾಲಕರಿಗೆ ಮತ್ತು ವೇಳೆಗೆ ಸರಿಯಾಗಿ ಅಚ್ಚುಮಾಡಿಕೊಟ್ಟ ಲಿಬರ್ಟಿ ಪ್ರಿಂಟರ್ಸದ ಸಂಚಾಲಕರು ಹಾಗು ಕೆಲಸಗಾರ ವರ್ಗಕ್ಕೆ ನನ್ನ ನೆನಕೆಗಳು ಸಲ್ಲುತ್ತವೆ. ಕೊನೆಯದಾಗಿ ನಾಡಿನ ನನ್ನ ಓದುಗ ಬಳಗವು ಇನ್ನುಳಿದ ಕೃತಿಗಳಂತೆ ಇದನ್ನು ಆದರದಿಂದ ಸ್ವಾಗತಿಸಬೇಕೆಂದು—

ಅಮರಗೋಳ
(ಹುಬ್ಬಳ್ಳಿ-ಧಾರವಾಡ)

ವಂದನೆಗಳೊಂದಿಗೆ
ಎಂ. ಜೀವನ

# ಪಾತ್ರವರ್ಗ

ಈಶ್ವರರಾಯ : ಮನೆಯ ಯಜಮಾನ ವಯಸ್ಸು ೪೦ ನಪುಂಸಕ,
ಗಂಗೂಬಾಯಿ ; ಈಶ್ವರನ ತಂಗಿ ಅರುಂಧತಿ ಸುವರ್ಣರ ತಾಯಿ ವಯಸ್ಸು೩೮
ಅರುಂಧತಿ ; ಈಶ್ವರನ ಪತ್ನಿ ವಯಸ್ಸು ೨೩
ಸುವರ್ಣಾ : ಅರುಂಧತಿಯ ತಂಗಿ ವಯಸ್ಸು ೧೮.

ರಮಾಕಾಂತ, ಪ್ರಮೀಲಾ } ಅಣ್ಣ ತಂಗಿಯರು, ಸ್ವತಂತ್ರ ಜೀವನ ಸಾಗಿಸುತ್ತ ಸಮಾಜ ಸೇವೆ ಮಾಡುವವರು.

ಚಂದ್ರಶೇಖರ ; ಶ್ರೀಮಂತ ತರುಣ, ರಮಾಕಾಂತನ ಗೆಳೆಯ.
ಡಾಕ್ಟರ ; ಹೆಂಣಿನ ಹಂಬಲದ ಡಾಕ್ಟರ. ವಯಸ್ಸು ೫೦ ಕ್ಕಿಂತ ಹೆಚ್ಚು.
ವಕೀಲ : ಸಾಹಿತಿ, ವಕೀಲ ಹಾಗು ಮುಖಂಡ, ಹೊಸ ಹೊಸ ಹೆಂಣುಗಳ ಅಭಿಲಾಷೆಯುವ, ವಯಸ್ಸು ೬೧.
ಶ್ರೀ ಶಿವೋತ್ತಮರಾಯ : ಎಂ. ಎಲ್ ಎ. ಜಾತೀಯತೆ ಇರಬಾರದೆನ್ನುವ ಜಾತ್ಯಾಂಧ. ವಯಸ್ಸು ೫೫.
ಸೆಕ್ರೆಟರಿ : ಕಾಂಗ್ರೆಸ್ ಆಫೀಸಿನ ಸೆಕ್ರೆಟರಿ. ವಯಸ್ಸು ೪೦; ಪರಿಸ್ಥಿತಿಗೆ ತಕ್ಕಂತೆ ಹೊಂದಿಕೊಂಡು ಹೋಗುವ ಮನಸ್ಸಿನವ.

ಮತ್ತು

ನರ್ತಕಿ

# ಅರ್ಪಣೆ

ನಾನು ಕಳೆದ ವರ್ಷ ಮೃತ್ಯುವಿನೊಂದಿಗೆ ಹೋರಾಡುತ್ತಿದ್ದಾಗ
ಬದುಕಿಸಲೆತ್ನಿಸಿದ ಕೆಲವರಲ್ಲೊಬ್ಬರಾದ
ಡಾ. ಆರ್. ಎಚ್. ಬುರಬುರೆ
ಅವರಿಗೆ—

—ಎಂ. ಜೀವನ

## ಸೂಚನೆ

ಈ ನಾಟಕವನ್ನು ಬರೆದವರ ಅನುಮತಿ ಇಲ್ಲದೆ ಅಭಿನಯಿಸಕೂಡದು. ( ಈ ಮಾತು ಖ್ಯಾತನಟ ಶ್ರೀ ಬಿ. ಓಬಳೇಶ್ವರರಿಗೆ ಅನ್ವಯಿಸುವದಿಲ್ಲ ) ಅಭಿನಯಿಸಬಯಸುವ ಕಲಾವಿಲಾಸಿಗಳು ಒಂದು ಪ್ರಯೋಗಕ್ಕೆ ೨೫-೦೦ ರೂ. ಕಳಿಸಿ ಅನುಮತಿ ಪಡೆಯಬೇಕು.

ಎಂ. ಜೀವನ.
ಅಮರಗೋಳ
( ಹುಬ್ಬಳ್ಳಿ-ಧಾರವಾಡ )

॥ ಶ್ರೀ ॥

# ಮುಂಚಾಪತಾರ

ಅರ್ಥಾತ್

# ತಾಳಿ ಕಟ್ಟಿದ ಗಂಡ

## ನಾಂದಿ

ಸಿರಿಸಿ ಹಾರಿಸಿ ಕನ್ನಡದ ಬಾವುಟ.
ಓಹೋ ಕನ್ನಡನಾಡು, ಆಹ ಕನ್ನಡನಾಡು
ಹಾರಿಸಿ, ತೋರಿಸಿ, ಕೆಚ್ಚೆದೆಯ ಬಾವುಟ,
ಗಾಳಿಯಲ್ಲಿ ಪಟ ಪಟ, ದಾಳಿಯಲ್ಲಿ ಚಟ ಚಟ
ಉರಿಯುತ್ತೋ ಉರಿಯಿತು, ಹಗೆಯು ಹಟ ಮನೆಮಾಟ.
ಹಾಳ್ ಹಾಳ್ ಸುರಿಯಿತು ಹಗೆಯು ದುಡುಕ್ಕಳಿ
    ಬಾಳ್ ಕನ್ನಡ ತಾಯ್
    ಏಳ್ ಕನ್ನಡ ತಾಯ್
    ಆಳ್ ಕನ್ನಡ ತಾಯ್
ಕನ್ನಡಿಗ ರೂಪಸಿ ಓ ರಾಜೇಶ್ವರಿ
ಕನ್ನಡದ ಬಾವುಟವ ಹಿಡಿಯುವವರಾರು ?
ಕನ್ನಡದ ಬಾವುಟಕೆ ಮಡಿಯುವವರಾರು ?
ನಮ್ಮ ಈ ಬಾವುಟಕೆ ಮಿಡಿಯುವವರಾರು ?
ಹೇಳಿರೋ ಹೆಸರೊಂದು ನೆನಹಿನಲಿ ಸುಳಿದರೆ,
ಹುಡುಕಿರೋ ಹಿಡಿ ತಾನೊಬ್ಬ ಮನೆಗುಳಿದರೆ

ತಾಯುಳಿಯೆ ನಾನುಳಿದೆ
ತಾಯಳಿಯೆ ನಾನಳಿದೆ
ಮನೆಕಾಯಿ, ತೇರು ಕಾಯಿ, ನಾಡಗಡಿ ಗುಡಿ ಕಾಯಿ
ಕಾಯ ಲೋರೆಯ, ಸಾಯಿ
ಎಂದೆಲ್ಲ ಹೇಳಿರೋ
ಆಹ ಕನ್ನಡ ನುಡಿ, ಆಹ ಕನ್ನಡ ನಾಡು
ಹಿರಿಯು ಕನ್ನಡ ಪಡೆ. ಮರಿಯು ಕನ್ನಡ ಪಡೆ
ಏಳಿರೋ, ಬಾಳಿರೋ,
ಕನ್ನಡದ ಬಾವುಟವ ಹಿಡಿಯಿರೋ, ನಡೆಯಿರೋ
ಏಳ್ ಕನ್ನಡ ತಾಯ್
ಬಾಳ್ ಕನ್ನಡ ತಾಯ್
ಆಳ್ ಕನ್ನಡ ತಾಯ್
ಕನ್ನಡಿಗರೊಡತಿ ಓ ರಾಜೇಶ್ವರಿ !

## ದೃಶ್ಯ ೧

# ನಗರದ ಸಾರ್ವಜನಿಕ ಉದ್ಯಾನ

ಸಮಯ, ಸಾಯಂಕಾಲ ಏಳೂ ಕಾಲು ಗಂಟೆ; ಉದ್ಯಾನದ ತುಂಬ ಸ್ತ್ರೀ-ಪುರುಷರು, ಬಾಲಕ-ಬಾಲಿಕೆಯರು ವಿಹರಿಸುತ್ತಿದ್ದಾರೆ. ಸೇಂಗಾ ಮಾರುವವರು, ಬಲೂನ್ ಮಾರುವವರು ಅತ್ತಿತ್ತ ತಿರುಗಾಡುತ್ತಿದ್ದಾರೆ. ಭಿಕ್ಷುಕ ನೊಬ್ಬನು ಹಾರ್ಮೋನಿಯಮ್ ಬಾರಿಸುತ್ತ ಚಿಕ್ಕ ಬಾಲಿಕೆಯನ್ನು ಕುಣಿಸುತ್ತ ಭಿಕ್ಷೆ ಬೇಡುತ್ತ ತಿರುಗುತ್ತಿದ್ದಾನೆ, ಉದ್ಯಾನ ದೊಳಗಿನ ಧ್ವನಿವರ್ಧಕವು " ಯಾ ಽ ಽ ಽ ಹೂ ಽ ಽ " ಹಾಡನ್ನು ಬಿತ್ತರಿಸ ತೊಡಗುತ್ತಲೇ ಕೂಡಿದ್ದ ಹುಡುಗರೆಲ್ಲ " ಯಾ ಽ ಹೂ " ಎಂದು ಕೇಕೆ ಹಾಕುತ್ತ ಹಾರಾಡ ತೊಡಗುವರು. ಅದನ್ನು ಕಂಡು ಹುಡುಗರ ಪಾಲಕರು ಹಾಗು ಇತರ ಸ್ತ್ರೀ-ಪುರುಷರು ನಗತೊಡಗುತ್ತಾರೆ. ಆ ಹಾಡು ಮುಗಿಯುವ ವರೆಗೆ ಉದ್ಯಾನ ದಲ್ಲಿ ಅದೇ ಪರಿಸ್ಥಿತಿ ಇರುತ್ತದೆ. ಅದೇ ಸಮಯಕ್ಕೆ ಸಡಿಲಾದ ಪಾಯು

ಜಾಮು ಹಾಗು ಅಷ್ಟೇ ಸಡಿಲಾದ ಬಿಳಿಯ ಜುಬ್ಬ ಧರಿಸಿದ ಕೆವಂದ ತಲೆಯ ರಮಾಕಾಂತನು ತನ್ನ ಗೆಳೆಯ ಚಂದ್ರಶೇಖರ ನೊಂದಿಗೆ ಉದ್ಯಾನ ದೊಳಗೆ ಪ್ರವೇಶಿಸುತ್ತಾನೆ, ಚಂದ್ರಶೇಖರನ ಉಡುಪು ರಮಾಕಾಂತನ ಉಡುಪಿಗಿಂತ ತೀರ ಭಿನ್ನವಾಗಿದೆ. ಅಂದರೆ ಅವನು ‘ ಫುಲ್ ಸೂಟ ’ ನಲ್ಲಿದ್ದಾನೆ. ಅವರೀರ್ವರೂ ಉದ್ಯಾನ ದೊಳಗೆ ಪ್ರವೇಶಿಸುವದಕ್ಕೂ ಧ್ವನಿವರ್ಧಕ ದೊಳಗಿನ ಹಾಡು ಮುಗಿಯುವದಕ್ಕೂ ಸರಿಹೋಗುತ್ತದೆ. ಅದನ್ನು ಗಮನಿಸಿದ ಚಂದ್ರಶೇಖರ...........

**ಚಂದ್ರಶೇಖರ:**– ಏನಪಾ ರಮಾಕಾಂತಾ; ನಾವು ಬರದ ಕೂಡ್ಲೆ ಹಾಡಽ ಮುಗಧೋತಲ್ಲೋ ?

**ರಮಾಕಾಂತ:**– ಮುಗೀಲಿ ಬಿಡಲ್ಲಾ ! ಅದು ಮುಗದರ ಮತ್ತೊಂದು ಕೇಳೂಣಂತ. ಅಂಥಂಗ ಈಗ ಟಾಯಿಮು ಎಷ್ಟಾಗೇದ ?

**ಚಂದ್ರಶೇಖರ:**– (ಮುಂಗೈಯಲ್ಲಿನ ವಾಚನ್ನು ನೋಡಿ) ಏಳೂ ಇಪ್ಪತ್ತು.

**ರಮಾಕಾಂತ:**– ಹಾಂಗಿದ್ರ ನಿನಗಿನ್ನ ಹಾಡು ಸಿಗೂದಿಲ್ಲ ಕೇಳಾಕ.

**ಚಂದ್ರಶೇಖರ :**– ಯಾಕ ?

**ರಮಾಕಾಂತ:**– ಏನೂ ಅರೀದವರ್ಹಾಂಗ ಯಾಕಂತ ಕೇಳ್ತೀಯಲ್ಲೋ ಮಳ್ಳೆ? ಏಳೂ ಇಪ್ಪತ್ತಕ್ಕ ಪ್ರಧಾನ ಮಂತ್ರಿಗಳ ಭಾಷಣಿಲ್ಲೇನು ?

**ಚಂದ್ರಶೇಖರ:**— ಓ ! ಹೌದು, ಮರತಽ ಬಿಟ್ಟಿದ್ದೆ.

**ರಮಾಕಾಂತ:**— ಹಾಂಗೆಲ್ಲಾ ಮರಿಬ್ಯಾಡಪಾ ! ಅದರಾಗ, ಅವರ ಇವತ್ತಿನ ಭಾಷಣಂತೂ ಅಗದೀ ಮಹತ್ವದ್ದದ !

**ಚಂದ್ರಶೇಖರ:**– ಹೌದು ಚೀನೀಯರ ಆಕ್ರಮಣದ ಕುರಿತು ಸದ್ಯದ ಪರಿಸ್ಥಿತಿಯ ಮ್ಯಾಲ ಮಾತಾಡವರದಾರ.........

ಎಂದು ಚಂದ್ರಶೇಖರನು ಇನ್ನೂ ಏನೇನೋ ಹೇಳಬೇಕೆನ್ನುತ್ತಿರುವಷ್ಟರಲ್ಲಿ ಧ್ವನಿವರ್ಧಕದೊಳಗಿಂದ..............

“ಇದುವರೆಗೆ ನೀವು ಅಖಿಲ ಭಾರತ ಆಕಾಶವಾಣಿಯ ವಿವಿಧ ಭಾರತಿಯ ಕಾರ್ಯಕ್ರಮಗಳನ್ನು ಕೇಳುತ್ತಿದ್ದಿರಿ. ಇನ್ನು ನಮ್ಮ ಪ್ರಧಾನ ಮಂತ್ರಿಗಳು ಚೀನೀಯರ ಆಕ್ರಮಣದ ಕುರಿತು ಭಾರತದ ಕೋಟಿಕೋಟಿ ಜನತೆಗೆ ಮನವಿ ಮಾಡಿಕೊಳ್ಳಲಿದ್ದಾರೆ ..........”

ರಾಷ್ಟ್ರಾಭಿಮಾನವು ಜಾಗ್ರತವಾಗುವಂತೆ ಅಭಿನಯಿಸಬೇಕು. ಒಟ್ಟಿನ ಮೇಲೆ ಎಲ್ಲರೂ ಶ್ರಮಿಸಬೇಕು. ಇದಕ್ಕೂ ಹೆಚ್ಚಿಗೆ ನಾನೇನೂಹೇಳಲಾರೆ. ನಮಸ್ತೆ. ಜಯ್ ಹಿಂದ !

ಪ್ರಧಾನ ಮಂತ್ರಿಗಳ ಭಾಷಣವು ಮುಗಿಯುತ್ತಲೆ ಉದ್ಯಾನ ದೊಳಗೆ ಸೇರಿದ್ದವರೆಲ್ಲ ಒಬ್ಬೊಬ್ಬರಾಗಿ ಎದ್ದು ಹೋಗುವರು. ರಮಾಕಾಂತ ಮತ್ತು ಚಂದ್ರಶೇಖರರೂ ಅಲ್ಲಿಂದ ನಿರ್ಗಮಿಸುವರು

## ದೃಶ್ಯ — ೨ — ಬೀದಿ

ರಮಾಕಾಂತ ಮತ್ತು ಚಂದ್ರಶೇಖರರು ಪ್ರವೇಶಿಸುವರು.

**ಚಂದ್ರಶೇಖರ**:– ರಮಾಕಾಂತ; ಪ್ರಧಾನ ಮಂತ್ರಿಗಳ ಭಾಷಣಾ ಕೇಳಿದ್ಯಾ ? ಇಂಥಾ ಇಳಿವಯಸ್ಸಿನ್ಯಾಗೂ ಅವರು ಎಷ್ಟು ಕೆಲಸಾ ಮಾಡ್ತಾರ !

**ರಮಾಕಾಂತ**:– ಹೌದಪಾ ! ಅವರೊಬ್ಬರು ಸಿನ್ಸೀಯರಾಗಿ ಮಾಡಿದರ ಏನಾಗ ತೈತಿ ? ಅವರಿಗಿರೋ ಕಳಕಳಿ ನಮ್ಮ ಮುಖಂಡರೊಳಗ ಇರಬೇಕಲ್ಲ ?

**ಚಂದ್ರಶೇಖರ**:– ಅಂದರ ? ನಮ್ಮ ಮುಖಂಡರಿಗೆ ರಾಷ್ಟ್ರದ ಬಗ್ಗೆ ಕಳಕಳೀನ ಇಲ್ಲಂತೀ ಏನು ?

**ರಮಾಕಾಂತ**:– ಹುಚ್ಚರ್ಹ್ಾಂಗ ಬಡಬಡಸಬ್ಯಾಡಾ ! ದಿನ ಬೆಳಗಾದರ ನಡಿ ಯೂದನ್ನ ಇವs ಕಣ್ಣೀಲೇ ನೋಡೂದಿಲ್ಲೇನು ?

**ಚಂದ್ರಶೇಖರ**:– ಹೌದಪಾ ! ನೀ ಹೇಳೂದು ಸುಳ್ಳಂತ ನಾ ಅನ್ನೂದಿಲ್ಲಾ, ಆದರ ಎಲ್ಲಾರೂ ಹಂಗs ಅದಾರಂತೀಯೇನು ?

**ರಮಾಕಾಂತ**:– ಎಲ್ಲಾರೂ ಹಂಗs ಅದಾರಂತ ನಾಯಾಕ ಹೇಳ್ಲಿ ? ಒಳ್ಳೇ ಯವರೂ ಇರಬಹುದು, ಆದರ ಅಂಥವರ್ನ ಯಾರೂ ಕೇಳೂದಿಲ್ಲ

**ಚಂದ್ರಶೇಖರ**:— ಅಂದ್ರ ? ನೀ ಹೇಳಿದ್ದು ನನಗೆ ತಿಳೀಲಿಲ್ಲ !

**ರಮಾಕಾಂತ**:— ನಾ ಹೇಳೂದಿಷ್ಟ ! ನಮ್ಮಲ್ಲಿ ಸಾವಿರಕ್ಕ ಒಬ್ಬರರಾ ಒಳ್ಳೇ ಅಧಿಕಾರಿಗಳು, ಮುಖಂಡರು ಇರಬಹುದು. ಇಲ್ಲಾಂತ ನಾನೂ ಹೇಳ ಲಾರೆ. ಆದರ ಅಂಥಾ ಒಳ್ಳೇಯವರು ಭಾಳ ದಿನಾ ಉಳಿಯೂದಿಲ್ಲಾ.

**ಚಂದ್ರಶೇಖರ**:— ಯಾಕ ?

**ರಮಾಕಾಂತ**:— ಯಾಕಂತ ಅರಿಯದವರ್ಹ್ಾಂಗ ಕೇಳ್ತೀಯಲ್ಲೋ ? ಅಲ್ಲಾ, ಎಲ್ಲಾರು ಶಗಣೀ ತಿನ್ನವರು ಇರೂವಾಗ ಅನ್ನಾ ತಿನ್ನೂದು ಅಪರಾಧಾ

**ಚಂದ್ರಶೇಖರ:**- ಹಣದಿಂದಾ ಏನಬೇಕಾದ್ದು ಮಾಡಬಹುದು ಅನ್ನೂದು ಎಲ್ಲಾರಿಗೂ ಗೊತ್ತೈತಿ. ಆದರ ಹೆಣ್ಣಿನ ಸ್ಟ್ರಾಕ್ ಏನು ಮಾಡತ್ತೈತಿ ಅನ್ನೂದು ಮಾತ್ರ ನನಗ ತಿಳೀಲಿಲ್ಲಾ.

**ರಮಾಕಾಂತ:**— ಚಂದ್ರೂ! ನೀ ಇಷ್ಟು ಹುಚ್ಚದೀದೀಂತ ನನಗೊತ್ತಿದ್ದಿಲ್ಲ ಬಿಡು. ಅಲ್ಲೋ, ಹೆಣ್ಣಿನಿಂದ ಏನೇನಾಗತ್ತೈತಿ ಅನ್ನೂದು ನಿನಗೊತ್ತಿಲ್ಲ? ಹ್ವಾದ ವರ್ಷ ಇಂಗ್ಲಂಡದ ಮಂತ್ರಿಮಂಡಳಾನ ಉರಳಿಸಿದಳಲ್ಲಾ, ಆ ಕ್ರಿಸ್ಟೀನ ಕೀಲರ್, ಆಕೇನು ಹೆಣ್ಣೋ ಗಂಡೋ?

**ಚಂದ್ರಶೇಖರ:**- ಓಹ್! ನೀನು ಈ ಅರ್ಥದಾಗ ಹೇಳಿದೇನು? ನನಗೊತ್ತಾಗಲಿಲ್ಲ ಬಿಡು. ಈಗ ಅರ್ಥಾತು.

**ರಮಾಕಾಂತ:**- ನಿಂದು ಟ್ಯೂಬಲಾಯಿಟ್ ಬ್ರೇನ್ ಅನ್ನೂದು ನನಗ ಮೊದಲs ಗೊತ್ತಿತ್ತು.

**ಚಂದ್ರಶೇಖರ:**– ಟ್ಯೂಬಲಾಯಿಟ ಬ್ರೇನು? ಹಾಂಗಂದ್ರ?

**ರಮಾಕಾಂತ:**– ಅಂದ್ರೇನು? ಸ್ವಿಚ್ ಹಾಕಿದ ಕೂಡ್ಲೆ ಟ್ಯೂಬಲಾಯಿಟ್ ಹತ್ತೂದಿಲ್ಲ. ಸ್ವಲ್ಪಹೊತ್ತು ಬಿಟ್ಟು ಹತ್ತೈತಿ, ಅದರ್ಹಾಂಗ ನಿನಗೂ ಯಾವದರಾ ವಿಷಯ ಒಮ್ಮೆಗೇ ತಿಳಿಯೂದಿಲ್ಲಾ ಭಾಳೊತ್ತಾದಮ್ಯಾಲ ಗೊತ್ತಾಗತೈತಿ ಆದಕs ಟೂಬ್‌ಲಾಯಿಟ್ ಬ್ರೇನೂ ಅಂತ ಅಂದದ್ದು.

**ಚಂದ್ರಶೇಖರ:**- ಆಯ್ತು ಬಿಡು ಮಹರಾಯಾ! ನಿನ್ನ ಕಡಿಂದಾ ಇದೊಂದು ಬಿರುದು ತೋಗೋಬೇಕಾಗಿತ್ತು.

**ರಮಾಕಾಂತ:**- ನಿನಗ ಬಿರುದು ಕೊಡಬೇಕೂ ಅಂತಲ್ಲ. ಚಂದ್ರೂ, ಆದರ! ಮಂಚಾವತಾರದ ಪ್ರಭಾವ ಎಂಥಾದೂ ಅನ್ನೂದನ್ನ ಹೇಳಿದೆ ಅಷ್ಟ

**ಚಂದ್ರಶೇಖರ:**- ರಮಾಕಾಂತಾ! ನೀ ಹೇಳೂ ಮಾತು ಖರೇಐತಿ. ಇಂಗ್ಲಂಡದಾಗಿನ ಕ್ರಿಸ್ಟೀನ್ ಕೀಲರಳದ ಯಾಕ? ನಮ್ಮಲ್ಲೇನು ಕಡ್ಮೀ ನಡೀತಾವೇನು? ಬೆಂಗಳೂರಿನ ಲೆಜಿಸ್ಲೇಟರ ಹೋಮಿನ್ಯಾಗ ನಡದದ್ದು ಕೇಳಿಲ್ಲೇನು?

**ರಮಾಕಾಂತ:**– ನೀ ಹಳೇ ಸುದ್ದಿಗೇ ಹೋಗ್ತಿಯಲ್ಲಾ. ಮೊನ್ನೆ—ಮೊನ್ನೆ ಕೇರಳದ ಹೋಮ್ ಮಿನಿಸ್ಟರ ಚಾಕೋ ರಾಜೀನಾಮೆ ಕೊಟ್ನಲ್ಲಾ ಆದರ ಖರೇ ಕಾರಣಾ ಗೊತ್ತೈತ್ತೇನು?

ಚಂದ್ರಶೇಖರ:- ಅದೇನಪಾ ?

ರಮಾಕಾಂತ:– ಅದೂ ಮಂಚಾಪವಕಾರದ ಪ್ರಕರಣಾನ.

ಚಂದ್ರಶೇಖರ:– ಅಂದ್ರ ?

ರಮಾಕಾಂತ:– ಅವ್ನಾ ಹೆಂಗಸರ್ನ ಸರಕಾರೀ ಕಾರಿನ್ಯಾಗ ಕರಕೊಂಡ್ಹೋಗಿ ರಬ್ಬರಿನ ತ್ವಾಟದಾಗ ಮಜಾ ಮಾಡ್ತಿದ್ನಂತ.

ಚಂದ್ರಶೇಖರ:– ಓಹೋ! ಅದಕ್ಕS ಅಲ್ಲೀ ಕಾಂಗ್ರೆಸ್ ಕಮಿಟಿಯವರು ಅವ್ನಾ ರಾಜೀನಾಮೆ ಕೊಟ್ಟ ಮ್ಯಾಲ ಒಂದು ಹೊಸಾ ಕಾರು ಕಾಣಿಕಿ ಕೊಟ್ಟಾರ. ಅಂತೂ ನಮ್ಮ ಮುಖಂಡರು ಮಾಡೋ ಹಲಕಟ್‌ಗಿರಿ ಭಾರೀ ಅದಾವು ಅಂಥಂಗಾತು.

ರಮಾಕಾಂತ:– ಮಳ್ಳS ! ನಿನಗಿನ್ನೂ ಸಂಶಯ ಅದ ಏನದರೊಳಗ? ತಮ್ಮಾ! ಬೆಂಗಳೂರ್ನಿಂದ ಮೈಸೂರಿಗೆ ಹೋಗೂದರೊಳಗ ಎಷ್ಟು ಟಿ. ಬಿ. (ಟ್ರಾವ್ಹಲರ್ಸ ಬಂಗ್ಲೆ) ಹತ್ತಾವು ಅನ್ನೂದು ಗೊತ್ತದ ಏನು?

ಚಂದ್ರಶೇಖರ:— ಇಲ್ಲ, ಯಾಕ?

ರಮಾಕಾಂತ:– ಆ ಟ್ರಾವ್ಹಲರ್ಸ ಬಂಗ್ಲೆದ ಗ್ವಾಡಿಗೆ ಮಾತಾಡಾಕ ಬಾರದ್ದು ಛಲೋ ಆಗೇತಿ.

ಚಂದ್ರಶೇಖರ:- ಯಾಕ ?

ರಮಾಕಾಂತ:- ಅವಕ್ಕ ಮಾತಾಡಾಕ ಬಂದಿದ್ರ ಇಂಥಾ ದಿನಾ, ಇಂಥಾ ಮುಖಂಡರು, ಇಂಥಾಕೀ ಜೋತೀಗೆ ಇಲ್ಲಿಮಲಕೊಂಡು ಆಕೀಗಂಡಂದೋ ಸಂಬಧಿಕರದೋ ಕೆಲಸಾ ಮಾಡಿಕೊಟ್ರು, ಅಂತ ಸಾಕ್ಷಿ ಹೇಳತಿದ್ವು ಆದರೇನು ಮಾಡೂದು, ಪಾಪ, ಅವಕ್ಕ ಬಾಯಿಲ್ಲಾಂತ ಇವರೆಲ್ಲಾ ಉಳಕೊಂಡಾರ.

ಚಂದ್ರಶೇಖರ:- ಹೌದು ರಮಾಕಾಂತಾ ! ಬರೇ ಮಂತ್ರಿಗಳS ! ಯಾಕ? ನಮ್ಮಲ್ಲೀ ಎಮ್ಮೆಲ್ಲೆ, ಎಂ. ಪಿಗಳು ಹಾಗು ಬ್ಯಾರೇ ಮುಖಂಡರೂ ಕಡಿಮೀ ಅದಾರೇನು ? ಬರದರ ಒಬ್ಬೊಬ್ಬರದು ಒಂದೊಂದು ಕಾದಂಬರೀನ ಆಗತೈತಿ.

ರಮಾಕಾಂತ:— ಅದಕSಪಾನಾ ಹೇಳಿದ್ದು, ಜಗತ್ತು ಲಂಚ ಮತ್ತು ಮಂಚದ ಮ್ಯಾಲ ನಿಂತೈತೀ ಅಂತ.

**ಚಂದ್ರಶೇಖರ:-** ಹಾಳಾಗಿ ಹೋಗ್ಲಿ ಬಿಡು ಅವರು, ಅಂಥಂಗ, ಅರುಂಧತಿ ಪ್ರಕರಣ ಎಲ್ಲಿಗೆ ಬಂತು ?

**ರಮಾಕಾಂತ:—** ನಿನಗೆ ಖರೇ ಹೇಳಲ್ಯಾ ? ಒಂದಿಲ್ಲೊಂದಿನ ಆಕೀ ಪ್ರಕರಣಾನೂ ಮಂಚಾವತಾರದಾಗ ಮುಗೀತೈತಿ.

**ಚಂದ್ರಶೇಖರ:—** ಯಾಕ ?

**ರಮಾಕಾಂತ:—** ಯಾಕಂದ್ರೇನು ? ಈಗ ಆಕೀ ಸಲುವಾಗಿ ಮಂತ್ರಿಗಳು, ಎಮ್ಮೆಲ್ಲೆಗಳು ಮತ್ತು ಪೇಪರಿನವರು ಪ್ರಯತ್ನಾ ಮಾಡ್ಲಿಕ್ಹತ್ತ್ಯಾರ.

**ಚಂದ್ರಶೇಖರ:-** ಅಂಥವರೆಲ್ಲಾ ಪ್ರಯತ್ನಾ ಮಾಡಾಕ್ಹತ್ತ್ಯಾರಂದ ಮ್ಯಾಲ ಒಂದು ರೀತೀಲೆ ವಿಚಾರಾ ಮಾಡಿದರ ಛಲೋನ ಆಗತೈತಿ, ಮಂಚಾವತಾರ ಹ್ಯಾಂಗಾಗತೈತಿ, ಆಕೀಗೇನು ಗಂಡಿಲ್ಲ ? ಬಂಧು-ಬಳಗಿಲ್ಲ, ? ಎಲ್ಲಾ ರೂ ಅದಾರ.

**ರಮಾಕಾಂತ:-** ಎಲ್ಲಾರೂ ಅದಾರನ್ನೂದು ನನಗೂ ಗೊತ್ತೈತೆಪಾ, ಆದರ ನಾಲ್ಕು ಜನರ್ಹ್ಾಂಗ ನಾನೂ ಸಂಸಾರಾ ಮಾಡಬೇಕು, ಒಳ್ಳೇ ರೀತೀಲೆ ಬದಕಬೇಕೂ ಅನ್ನೋ ಅರುಂಧತೀನ್ನ ಆಕೀ ಗಂಡಾ, ಬಂಧು-ಬಳಗ ಕೂಡಿ ಒಂದಿಲ್ಲೊಂದಿನ ಸೂಳೀನ್ನ ಮಾಡಿಡತಾರ ನೋಡಬೇಕಾದರ !

**ಚಂದ್ರಶೇಖರ:-** ಆಕೀಗೆ ದೊಡ-ದೊಡ್ಡವರು ಬುದ್ಧೀ ಹೇಳಾಕ್ಹತ್ತ್ಯಾರಂತ ನೀನ್ನ ಹೇಳಿದಿ. ಅಂದಾಗ ಆಕಿ ಸೂಳ್ಯಾಕಾಗತಾಳ ?

**ರಮಾಕಾಂತ:-** ಚಂದ್ರು ! ಆಕಿ ಬರೇ ಸೂಳೆಲ್ಲ, ಊರಸೂಳಿ ಆಗತಾಳ ಊರ ಸೂಳಿ.

**ಚಂದ್ರಶೇಖರ:-** ಏನೋಪಾ ! ನೀ ಹೇಳೂದು ನನಗೊಂದೂ ಅರ್ಥಾಗವಲ್ದು.

**ರಮಾಕಾಂತ:-** ಅದಕ್ಕ ನಿನಗ ಟ್ಯೂಬ್ ಲಾಯಿಟ್ ಬ್ರೇನ್ ಅನ್ನೂದು.

**ಚಂದ್ರಶೇಖರ:—** ಏನಾರೇ ಕೇಳಿದರ ಏನಾರೆ ಹೇಳ್ತೀದಿ ಆಯ್ತು.

**ರಮಾಕಾಂತ:—** ಏನಾರೇ ಹೇಳೂದಲ್ಲೋ ಚಂದ್ರು ! ಆಕೀ ಪರಿಸ್ಥಿತೀನ ಹಾಂಗೈತಿ, ಅದಕ್ಯಾರೇನು ಮಾಡೂದು ?

**ಚಂದ್ರಶೇಖರ:-** ಅಂದ್ರು ?

**ಮಾಕಾಂತ:—** ಆಕೀ ಗಂಡಾ ತಲಿಹಿಡಕದಾನ, ಆಕೀನ್ನ ಎಲ್ಲಿ ಬೇಕಲ್ಲಿ ಕಳಸಾಕ ತಯಾರದಾನ, ಆದರ ಆಕಿ ತಯಾರಿಲ್ಲ.

**ಚಂದ್ರಶೇಖರ:**– ಆಕಿ ತಯಾರಿರದಿದ್ರ ಮುಗಧೋತು. ಯಾರೇನ ಮಾಡ್ತಾರ ?

**ರಮಾಕಾಂತ:**– ಅಂಥಾ ತಾಪತ್ರಯದೊಳಗ ಆಕಿ ಹಂಗs ಇರೂದು ಹ್ಯಾಂಗ ಸಾಧ್ಯ ? ಖಲ್ಲs........

**ಚಂದ್ರಶೇಖರ:**– ಯಾಕಪಾ ! ಗಾಡೀ ಅರ್ಧಕ್ಕ ನಿಲ್ಲಿಸಿ ಬಿಟ್ಟೆಲ್ಲಾ ?

**ರಮಾಕಾಂತ:**– ಅರುಂಧತೀ ಪ್ರಕರಣಾನ ಹಾಂಗೈತದು.

**ಚಂದ್ರಶೇಖರ:**– ಹ್ಯಾಂಗೈತಪಾ ?

**ರಮಾಕಾಂತ:**– ಆಕೀ ಗಂಡಿದ್ದಾನಲ್ಲಾ, ಈಶ್ವರರಾಯ ! ಅವ್ನಾ ನಪುಂಸಕ, ಮದಿವ್ಯಾಗಿ ಆರೊರ್ಷ ಆದರೂ ಗಂಡ–ಹೆಂಡತಿ ಸಂಪರ್ಕಿಲ್ಲ.

**ಚಂದ್ರಶೇಖರ:**– ಈ ವಿಷಯ ನನಗ್ಗೊತ್ತಿದ್ದಿಲ್ಲ ಬಿಡು, ಹೀಂಗಿದ್ರೂ ಮದ್ವಿ ಯಾಕ ಮಾಡಿಕೊಂಡನೋ ಪುಣ್ಯಾತ್ಮಾ ! ಮತ್ತ ನಾನು ಅಧ್ಯಾತ್ಮ ವಾದಿ ಅಂತ ಬ್ಯಾರೇ ಹೇಳಿಕೊಂತ ತಿರಿಗ್ಯಾಡ ತಾನಲ್ಲಾ !

**ರಮಾಕಾಂತ:**– ಈ ವಾದಿಗಳೆಲ್ಲಾ ಹಿಂಗ. ಕೈಲಾಗದವರು ಅಧ್ಯಾತ್ಮದ ಹೆಸರಿ ನ್ಯಾಗ ಫಲಕಟ್ ಧಂದೆ ಮಾಡ್ತಾರ. ಈಶ್ವರ ರಾಯನಂಥಾ ಕೈಲಾಗ ದವರು ಹೆಂಗಸರ ಗಳಿಕೀ ತಿನಬೇಕಂತಾರ

**ಚಂದ್ರಶೇಖರ:**– ಅರುಂಧತಿ ಆ ಉದ್ಯೋಗಕ್ಕ ಒಲ್ಲೆಂತಿರಬೇಕು.

**ರಮಾಕಾಂತ:**— ಹೌದು, ಆದರ ಇವ್ನಾ ಎಲ್ಲಾರಿಗೂ ಆಕೀನ ತೋರಿಸಿ ಗೊಂತ ಹಣಾ ವಸೂಲ್ಮಾಡತಾನ.

**ಚಂದ್ರಶೇಖರ:**— ಜಗತ್ತು ವಿಚಿತ್ರ ಐತಿ ಬಿಡು, ಮಾಡಿಕೊಂಡ ಹೆಂಡತೀನ ಮಂದೀ ಹಂತೇಕ ಕಳಸವರೂ ಆದಾರಂದಮ್ಯಾಲ ಇನ್ನೇನುಳೀತು ?

**ರಮಾಕಾಂತ:**— ಬರೇ ಮಾಡಿಕೊಂಡ ಹೆಂಡ್ತೀನ ಅಲ್ಲ ಚಾದ್ರೂ ! ಒಡ ಹುಟ್ಟಿದ ಅಕ್ಕ ತಂಗೇರ್ನೂ ಕಳಸೋ ಮಹಾನುಭಾವರದಾರ.

**ಚಂದ್ರಶೇಖರ:**— ಖಂಪ್ರ ?

**ರಮಾಕಾಂತ:**— ಅಂದ್ರೇನು ? ನೌಕರೀ ಬೇಕಾದವರು, ನೌಕರಿಯೊಳ ಗಿದ್ದು ಬಡ್ತೀ ಬೇಕನ್ನವರು, ದೊಡ್ಡ ದೊಡ್ಡ ಕಾಂಟ್ರ್ಯಾಕ್ಟ ಹಿಡೀಬೇಕ ನ್ನವರು ಹಣದ ಜೋತೀಗೆ ತಮ್ಮ್ಮನೆನ್ನ ಹೆಂಗಸರ್ನೂ ಸಪ್ಲಯ್ ಮಾಡಿ ತಮ್ಮ ಕಲಸಾ ಮಾಡಿಸಿಕೊಂತಾರ.

**ಚಂದ್ರಶೇಖರ:—** ಅಲ್ಲಪಾ! ಇವರಾಗೇ ಮುಂದ ಬಿದ್ದು ಹೆಂಗಸರ್ನ ಸಪ್ಲಾಯ್ ಮಾಡ್ತಾರಂದಾಗ ಮಜಾಮಾಡವರದೇನು ತಪ್ಪು? ಇದ್ದಲ್ಲಿಗೆ ಬಂದ ಹೆಣ್ಣು ಬಿಡಾಕ ಅವರೇನು ಈಶ್ವರರಾಯನ್ಹಂಗ ಪೊಣೇಅಳಗೋಳ?

**ರಮಾಕಾಂತ:—** ಆದನ್ನs ನಾ ಬ್ಯಾಡಾ ಅನ್ನೂದು. ಹೆಂಗಸರ್ನ ಸಪ್ಲಾಯ್ ಮಾಡಿ ಕೆಲಸಾ ಸಾಧಿಸಿಕೊಳ್ಳವರಿಗಂತೂ ಯೋಗ್ಯತಾ ಇರೂದಿಲ್ಲಂತ ಅಂಥಾ ಕೆಲಸಾ ಮಾಡಿರ್ತಾರ. ಅಂಥವರ್ನ ಹೆಣ್ಣಿನಾಸೇಕ ನೌಕರಿಗಿಟ ಗೊಂಡ್ರ ಮುಂದಿವರೂ ಎರಡನೇಯವ್ರ ಹೆಂಗಸರ್ನ ಬೇಡವರs ಹೌದಲ್ಲೋ?

**ಚಂದ್ರಶೇಖರ:—** ಹೌದು ಮತ್ತ! ಲಂಚಾಕೊಟ್ಟು ನೌಕರೀಗ್ಹೋದಾಂವಾ ಮುಂದ ತಾನೂ ಲಂಚಾ ತಿನ್ನೂಹಾಂಗ, ಹೆಂಗಸರ್ನ ಸಪ್ಲಾಯ್ ಮಾಡಿಮುಂದ ಬಂದಾವ್ನಾ ತಾನೂ ಎರಡನೇಯವರ ಹೆಂಗಸರ್ನ ಬೇಡೂದು ಸ್ವಾಭಾವಿಕ.

**ರಮಾಕಾಂತ:—** ಇದನ್ನs ನಾನು ಬ್ಯಾಡಾ ಅನ್ನೋದು. ಇದು ಎಲ್ಲೀ ತನಕಾ ಹಿಂಗs ನಡೀಬೇಕು. ಇದಕ್ಕ ಕೊನೀ ಅನ್ನೂದು ಇಲ್ಲs ಇಲ್ಲೇನು? ಇವತ್ತು ನಮ್ಮ ರಾಷ್ಟ್ರದ ಪರಿಸ್ಥಿತಿ ಹ್ಯಾಂಗೈತಿ ಗೊತ್ತೈತಿಲ್ಲೋ? ಇಂಥಾದರಾಗ ಇವರು ಹೀಂಗ ಮಜಾಮಾಡಿಕೊಂತ ಅಡ್ಯಾಡತಾರಲ್ಲಾ, ಇವರಿಗೆ ಕೇಳವರs ಇಲ್ಲೇನು?

**ಚಂದ್ರಶೇಖರ:—** ಹೌದು ರಮಾಕಾಂತ ನೀ ಹೇಳಿಧಂಗ ಈ ಹೊಲಸು ಧಂದೆ ಬೆಳಕೊಂತ ಹೊರಟೈತಿ.

**ರಮಾಕಾಂತ:—** ಹೌದು. ಇದ್ದದ್ದರೊಳಗ ಸಂತೋಷದ ಸಂಗತೀ ಅಂದ್ರ, ಇವರೆಲ್ಲಾ ಮಾಡೋ ಹಲಕಟ್‌ಗಿರಿ ಸೆಂಟ್ರಲ್ ಗವ್ಹರ್ನಮೆಂಟನವರಿಗೂ ಗೊತ್ತಾಗೇತಿ. ಅದಕ್ಕಂತ ಗುಲ್ಝಾರಿಲಾಲ ನಂದಾರಂಥ ಮಿನಿಸ್ಟರು ಇಂಥಾ ಹೊಲಸು ಧಂದೆ ನಿಲ್ಲಬೇಕೂ ಅಂಥ ಪಬ್ಲಿಕ್ಕಾಗಿ ಹೇಳಾಕ್ಹತ್ಯಾರ.

**ಚಂದ್ರಶೇಖರ:—** ಹೋಗಲಿ ಬಿಡು. ಆದದ್ದನ್ನ ನೋಡತಾ ಹೋದರಾತು. ಅದಕ್ಕೂ ಹೆಚ್ಚು ನಮ್ಮಿಂದೇನಾಗತೈತಿ?

ರಮಾಕಾಂತ:— ಇಂಥಾದ್ದನ್ನ ನಾವು ನೋಡ್ತಾ ಹೋಗಬಾರದು ಚಂದ್ರೂ. ಸಾಧ್ಯಾದಷ್ಟು ಪ್ರತಿಭಟಿಸ್ತಾ ಹೋಗಬೇಕು.

ಚಂದ್ರಶೇಖರ:— ನಮ್ಮಂಥ ಒಬ್ಬೊಬ್ಬರು ಪ್ರತಿಭಟಿಸಿದರ ಆಗೂದರಾಏನು? ಆಗಳೇ ನೀನs ಹೇಳಿದಿಯಲ್ಲಾ, ಎಲ್ಲಾರೂ ಶಗಣೀ ತಿನ್ನದವರು ಇರೂವಾಗ ಅನ್ನಾ ತಿನ್ನೂದು ಅಪರಾಧಾಗತೈತೀಂತ.

ರಮಾಕಾಂತ:— ಅಂದ್ರ? ಎಲ್ಲಾರ್ಹಾಂಗ ನಾವೂ ಅದನ್ನs ತಿನಬೇಕಂತೀಯೇನು? ಅದು ಅಧಿಕಾರಿಗಳಿಗೆ, ಮುಖಂಡರಿಗೆ ಸಾಧ್ಯಾಗಲಿಕ್ಕಿಲ್ಲ. ಆದರ ನಮ್ಮ-ನಿಮ್ಮಂಥವರು ಧೈರ್ಯದಿಂದ ಮುಂದ ಬಂದರ ಎಲ್ಲಾ ಆಗತೈತಿ.

ಚಂದ್ರಶೇಖರ:— ಅದು ಹ್ಯಾಂಗ?

ರಮಾಕಾಂತ:— ಈಗ ನೋಡು, ಮಿನಿಸ್ಟರು, ಮುಖಂಡರು ಮತ್ತು ಅಧಿಕಾರಿಗಳು ನೂರಾಎಂಟು ಭಿಡೇದೊಳಗ ಸಿಕ್ಕೊಂಡಿರತಾರ. ಅಲ ಅವರಿಗ ಬ್ಯಾರೇಯವರ ಹೆದರಿಕೀನೂ ಇರತೈತಿ. ಆದರ ನಮಗ್ಯಾಕ ಹೆದರಿಕೈತಿ?

ಚಂದ್ರಶೇಖರ:— ಅಂದ್ರ? ನೀ ಹೇಳೂದು ನನಗ ತಿಳೀಲಿಲ್ಲಾ!

ರಮಾಕಾಂತ:— ಈಗ ನಿಂದs ವಿಚಾರ ಮಾಡು, ನೀನು ಆಗರ್ಭ ಶ್ರೀಮಂತರ ಮಗ. ಯಾವುದಕ್ಕೂ ಎರಡನೇಯವರಿಗೆ ಕೈ ಒಡ್ಡೊ ಪ್ರಸಂಗ ನಿನಗ ಬರೂದಿಲ್ಲ. ನಂದೂ ಹಂಗ ಐತಿ. ನಾನು ನಿನ್ನಷ್ಟು ಶ್ರೀಮಂತ ಅಲ್ಲದಿದ್ರೂ ಸ್ವತಂತ್ರ ಜೀವನಾ ಸಾಗಸ್ತೀನಿ. ಅಂದ್ರ ಟ್ಯೂಶನ್ ಕ್ಲಾಸ್ ನಡಸ್ತೀನಿ. ನನ್ತಂಗಿ ಮನಿಯೊಳಗ ಹೊಲಿಗೀ ಕ್ಲಾಸ ನಡಸ್ತಾಳ ಹೀಂಗಾಗಿ ನಮಗ ಯಾರ್ದೂ ಹೆದರಿಕಿಲ್ಲ. ನಾವು ಬೇಕಾಧಾಂಗ ಸಾರ್ವಜನಿಕರ ಸೇವಾ ಮಾಡಬಹುದು.

ಚಂದ್ರಶೇಖರ:– ನೀ ಹೇಳೂದು ತಿಳೀತಪಾ! ಆದರ ನಮ್ಮಂಥಾ ಒಬ್ಬಿಬ್ಬರಿಂದಾ ಏನಾಗತೈತಿ?

ರಮಾಕಾಂತ:– ಎಲ್ಲಾ ಆಗತೈತಿ. ಮೊದಲು ತ್ರಾಸಾಗಬಹುದು. ಆದರ ನಾವು ಆದಕ್ಕ ಹೆದರದ ಎದೆಗೊಟ್ಟು ಮುಂದ ಸಾಗಬೇಕು. ಅಂದ್ರ ಇವತ್ತಿಲ್ಲಾ ನಾಳೆ ಮತ್ತೊಬ್ಬಾಂವಾ ಪ್ರತಿಭಟಿಸಾಕ ಹುಟ್ಟೇಹುಟ್ತಾನ.

ದಿನಾ ಹೋಧಂಗ ಎಲ್ಲಾರ ಕಣ್ಣೂ ತೆರೀತಾವು.

**ಚಂದ್ರಶೇಖರ:**— ಹೌದು. ನೀ ಹೇಳೂದು ಸುಳ್ಳೇನಲ್ಲ! ಅದಿರಲಿ. ಈಗ ರಾತ್ರಿ ಭಾಳಾತು. ಮನಿಗೆ ಹೋಗೂನ್ನಡಿ.

**ರಮಾಕಾಂತ:**— ಹೌದು, ನಡೀ ಹೋಗುಣು. ಮನ್ಯಾಗ ತಂಗಿ ನನ್ದಾರೀ ನೋಡ್ತಿರಬೇಕು.

ಎಂದು ನುಡಿದು ಇಬ್ಬರೂ ಹೋಗುತ್ತಿರುವಷ್ಟರಲ್ಲಿ ಚಂದ್ರ ಶೇಖರನು ಏನನ್ನೋ ಜ್ಞಾಪಿಸಿಕೊಂಡು........

**ಚಂದ್ರಶೇಖರ:**— ಅಂಥಂಗ ಒಂದ್ಮಾತು ನೆನಪಾತ್ನೋಡು!

**ರಮಾಕಾಂತ**·— ಮತ್ತೇನಪಾ ಅದು?

**ಚಂದ್ರಶೇಖರ:**— ಮತ್ತಿನ್ಯಾವದು? ಅದs ಮುಖಂಡರು, ಮಂತ್ರಿಗಳು ಮತ್ತ ಅಧಿಕಾರಿಗಳು ಮಾಡೋ ಹಲಕಟ್‌ಗಿರೀನೆಲ್ಲಾ ಪೇಪರಿನವ ರ್‍ಯಾಕ ಬಯಲಿಗ್ಹಾಕ ಬಾರ್‍ದೂ ಅಂತ?

**ರಮಾಕಾಂತ:**— ಇಂಥಾ ಸುದ್ದಿ ಬಯಲಿಗ್ಹಾಕಾಕ ಪೇಪರಿನವರೇನು ಹುಚ್ಚ ರಂತ ತಿಳ್ದೀ ಏನು? ಅಲ್ದ ಅವರಿಗೂ ನಾಲ್ಕದಿನಾಥಂದಾಗಿ ಬದಕ ಬೇಕಾಗಿರತೈತಿ, ಅದಕ್ಕs ಅವರು ಬರೇ ಅಡಿಗಲ್ಲ ಸಮಾರಂಭ ಉಧ್ಘಾ ಟನ ಸಮಾರಂಭದ ಸುದ್ದೀನ ಫೋಟೋ ಸಹಿತ ಪಬ್ಲಿಶ್ ಮಾಡ್ತಾರ

**ಚಂದ್ರಶೇಖರ:**- ಅವನ್ನ ಮಾಡ್ಲೆಪಾ, ಅವರಿಗ್ಯಾರ ಬ್ಯಾಡಂತಾರ, ಆದರ ಅದರ ಜೊತೀಗೆ ಇಂಥಾ ಸುದ್ದೀನೂ ಹಾಕೂದ್ರಿಂದಾ ಅವಂಗೇನು ಲುಕ್ಸಾನಾಗತೈತಿ?

**ರಮಾಕಾಂತ:**— ತಮ್ಮಾ, ಅದು ನಿನಗೆ ಗೊತ್ತಾಗೂದಿಲ್ಲಪಾ!

**ಚಂದ್ರಶೇಖರ:**— ಅಂದ್ರ?

**ರಮಾಕಾಂತ:**— ಅಂದಿಷ್ಟ! ಇಂಥಾ ಸುದ್ದಿಗೋಳ್ನ ಹಾಕಿದರೂ ಅಂದ್ರ ನಮ್ಮುಖಂಡ್ರು ಹಾಗು ಅಧಿಕಾರಿಗಳು ಅವರ ಮ್ಯಾಲ ಕಣ್ಣಿಟ್ಟ ಬಿಡ್ತಾರ. ಆಮ್ಯಾಲ ಆ ಪೇಪರು ಬಂದಾಗಾಕ ಏನೇನ ಮಾಡ ಬೇಕು ಅದನ್ನೆಲ್ಲಾ ಮಾಡಿಬಿಡ್ತಾರ. ಅದಕ್ಕs ಪೇಪರಿನವರು ಸುಮ್ನ ಇರತಾರ

**ಚಂದ್ರಶೇಖರ:**— ಹಾಂಗಾದರ ಪೇಪರಿನವರೂ ಇನುಳಿದವ್ರ್ಹಾಂಗs ಅದಾ

ರನ್ನು. ಯಾಕ? ಯಾರ ಹೆದರಿಕೀನೂ ಇಲ್ಲದಂಗ ಪೇಪರ ನಡ ಸೂದು ಆಗೂದಿಲ್ಲೇನು?

**ರಮಾಕಾಂತ:**– ಆಗತೈತಿ. ಆದರ ಅಂಥಾ ಧೈರ್ಯದವರೊಂದೇ ಬೇಕಲ್ಲ! ಗವ್ಹರ್ನರ ಮೆಂಡ ಜಾಹೀರಾತಿನಾಸೇಕ ಸರಕಾರದ ಬಾಲಾ ಬಡಿಯಾಕ ಬೇಕಾಗತೈತಿಕಿ. ಅವರೇನು ಮಾಡಿದರೂ ಅದನ್ನ ಮುಚ್ಚಿಟ್ಟು ಹೋಗಳಬೇಕಾಗತೈತಿ ಹೀಂಗಾಗಿ ಕಲವರು ಸುಮ್ನs ಇದ್ದು ಬಿಡ ತಾರ. ಮತ್ತ ಕೆಲವರು ಬ್ಲ್ಯಾಕ್ ಮೇಲ್ ಮಾಡತ್ತಾರ. ಇನ್ನ ಜಗವಾಣಿ ಯಂಥಾ ಪೇಪರಿನವರು ಗಂಡ–ಹೇಣ್ತೀ ಜಗಳದಾಗ ಕೈ ಹಾಕಿ ಅದರಾಗ ತಮ್ಮ ದೊಡ್ಡಸ್ತನಾ ತೋರಸ್ತಾರ. ಹೀಂಗಾಗಿ ಇವತ್ತು ನಮ್ಮ ಹಿಂದುಸ್ತಾನದಾಗ ಬ್ಲಿಟ್ಜದಂಥಾ ಒಂದೆರಡು ಪತ್ರಿಕೆ ಬಿಟ್ಟರ ನಿಷ್ಪ್ರಿರವಾಗಿ ಬರಿಯುವು ಒಂದೂ ಇಲ್ಲಾಂತs ಹೇಳಬೇಕು. ಹೀಂಗೈತಿ ನಮ್ಮಲ್ಲೀ ಪೇಪರಿನವರ ಹಣೇಬರಾ, ಹೋಗಲಿ ಬಿಡು. ಟಾಯಿಂ ಭಾಳಾತು ಮನೀಗೆ ಹೋಗೂನ್ನಡಿ.

(ಇಬ್ಬರೂ ಹೋಗುವರು)

## ದೃಶ್ಯ ೩

## ಈಶ್ವರರಾಯನ ಮನೆ

ಈಶ್ವರರಾಯನ ಮನೆಯು ಮಧ್ಯಮ ವರ್ಗದವರ ಮನೆಯಷ್ಟು ಓರಣವಾಗಿಲ್ಲ. ಸಾಮಾನುಗಳು ಎಲ್ಲಿ ಬೇಕಲ್ಲಿ ಬಿದ್ದಿವೆ. ಹಾಸುಗೆಯ ಸುರುಳಿಗಳೂ ಅಸ್ತವ್ಯಸ್ತವಾಗಿ ಬಿದ್ದುಕೊಂಡಿವೆ ಇದ್ದ ಎರಡು ಮುರುಕು ಖುರ್ಚಿಗಳನ್ನು ನಡುಮನೆಯಲ್ಲಿಟ್ಟಿದ್ದಾರೆ. ಅದರಲ್ಲೊಂದರ ಮೇಲೆ ಅರುಂಧತಿಯು ಕುಳಿತುಕೊಂಡು ಜಡೆ ಹಾಕಿಕೊಳ್ಳುತ್ತ—

ಬೆಟ್ಟದ ಮೇಲೊಂದು ಮನೆಯ ಮಾಡಿ ಮೃಗಂಗಳಿಗಂಜಿದಡೆಂತಯ್ಯ
ಸಮುದ್ರದ ತಡಿಯಲ್ಲಿ ಮನೆಯ ಮಾಡಿ ನೊರೆ ತೆರೆಗಳಿಗಂಜಿದಡೆಂತಯ್ಯ
ಸಂತೆಯೊಳಗೊಂದು ಮನೆಯ ಮಾಡಿ ಮಾತುಗಳಿಗಂಜಿದಡೆಂತಯ್ಯ
ಚನ್ನಮಲ್ಲಿಕಾರ್ಜುನದೇವ ಕೇಳಯ್ಯ

ಲೋಕದೊಳಗೆ ಹುಟ್ಟಿದರ ಬಳಿಕ ಸ್ತುತಿ ನಿಂದೆಗಳು ಬಂದರೆ ಮನದಲ್ಲಿ ಕೋಪವ ತಾಳದೆ ಸಮಾಧಾನಿಯಾಗಿರಬೇಕು.

ಎಂಬ ವಚನವನ್ನು ಸಾವಕಾಶವಾಗಿ ಹಾಡುತ್ತಿದ್ದಾಳೆ. ವಯಸ್ಸು ಸುಮಾರು ೨೪ ಆಕೆಯ ತಂಗಿ ಸುವರ್ಣಾ ಹಾಸುಗೆಯ ಸುರುಳಿಯೊಂದ ಮೇಲೆ ಕುಳಿತುಕೊಂಡು ಓದುತ್ತಿರುವಳು. ಆಕೆಯ ವಯಸ್ಸು ೧೮. ಎಸ್ಸೆಸ್ಸರ ಲ್ಸಿಗೆ ಓದುತ್ತಿದ್ದಾಳೆ.

**ಅರುಂಧತಿ;**– (ಜಡೆಹಾಕಿಕೊಳ್ಳುತ್ತ) ಸುವರ್ಣಾ, ಏ ಸುವರ್ಣಾ.

**ಸುವರ್ಣಾ:**– (ಉತ್ತರನೀಯದೆ ಓದಿನಲ್ಲಿಯೇ ಮಗ್ನಳಾಗಿರುವಳು).

**ಅರುಂಧತಿ:**– ಏ ಸುವ್ವಿ! ಕಿವಿ ಕೇಳ್ಸೋದಿಲ್ಲೇನು?

**ಸುವರ್ಣಾ:**– ನಾನು ಸ್ಟಡೀ ಮಾಡಾಕ್ಹತ್ತೀರೂದು ನಿನ್ನ ಕಣ್ಣಿಗೆ ಕಾಣ್ಸೂದಿಲ್ಲೇನು?

**ಅರುಂಧತಿ:**– ದೊಡ್ಡ ಶ್ಯಾಣ್ಯಾಕಿ ಆಗಬ್ಯಾಡ, ಬಾ ಅಂದರ ಬರಬೇಕು.

**ಸುವರ್ಣಾ:**– (ಓದುತ್ತಿದ್ದ ಪುಸ್ತಕವನ್ನು ಮುಚ್ಚಿ ಸಿಟ್ಟಿನಿಂದ ಅರುಂಧತಿಯ ಬಳಿಗೆ ಬಂದು) ಹ್ಞ್! ಬಂದೀನಿ ನೋಡು. ಏನಾಗಬೇಕು?

**ಅರುಂಧತಿ;**– (ಸುವರ್ಣಳ ಸಿಟ್ಟಿನ ಮುಖವನ್ನು ನೋಡಿ ವಿಷಾದದ ನಗೆ ಬೀರುತ್ತ) ನನ್ನ ಮ್ಯಾಲ ಸಿಟ್ಟು ತೋರಸಾಕ ನೀ ಒಬ್ಬಾಕಿ ಕಡಿಮಿ ಆಗಿದ್ದಿ, ಅಲ್ಲ?

**ಸುವರ್ಣಾ:**– ಇಲ್ಲಕ್ಕಾ! ನಾನ್ಯಾಕ ಸಿಟ್ಟಾಗ್ಲಿ ನಿನಮ್ಯಾಲ?

**ಅರುಂಧತಿ:**— ಹಾಂಗಿದ್ರ ಮುಖಃ ಯಾಕ ಗಂಟ್ಹಾಕೀದಿ?

**ಸುವರ್ಣಾ:**– ಮತ್ತೇನ್ಮಾಡ್ಲಿಕ್ಕ? ಪರೀಕ್ಷೆ ಸಮೀಪಕ್ಕ ಬಂತು. ಮಾಮಾ ನೋಡಿದರ ಪುಸ್ತಕಾ ಕೊಡಸವಲ್ಲ. ಗೆಳತೇರ್ಹಂತೇಕ ಇಸಗೊಂಡೋಪ ಬೇಕು. ಇವತ್ತು ಮುಂಜಾನೆ ಸರ್ಜೀ ಹಂತೇಕ ಹೋಮ್ ಸಾಯನ್ಸ ಇಸಗೊಂಡಬಂದು ಓದಾಕ ಕುಂತಿದ್ದೆ. ಇನ್ನೂ ಎರಡ ಪೇಜ ಓದಿದ್ದಿಲ್ಲಾ, ನೀ ಕರದಬಿಟ್ಟಿ. ಅದಕs ಬೇಜಾರಾತು, ಅಷ್ಟಕ್ಕ ನಿ ಏನೂ ತಿಳಕೋಬ್ಯಾಡಕ್ಕಾ!

**ಅರುಂಧತಿ:**– ಹುಚ್ಚಿ! ಎಂಥೆಂಥವರು ಎಷ್ಟು ಅನ್ಯಾಯಾ ಮಾಡಿದರೂ ನಾ ಏನೂ ತಿಳ್ಕೊಂಡಿಲ್ಲ. ಅಂದಾಗ ನನ್ನ ಪ್ರೀತೀ ತಂಗೀ ಮಾತು

ಮನಸ್ಸಿಗೆ ಹಚಿಗೊಂತೀನೇನು?

**ಸುವರ್ಣಾ:**– ಅದು ಹೋಗಲಿ ಬಿಡಕ್ಕ. ನಿನ್ನ ಮದ್ವೆಪಕ್ಕ ಯಾರೇನ ಮಾಡ್ತಾರ. ನನಗ ಯಾತಕ್ಕ ಕರದೀ ಅದನ್ನೇಳು.

**ಅರುಂಧತಿ:**– ಹೆಳಲು ಹಾಕ್ಕೊಳ್ಳೂದಾಯ್ತು. ಅದಕ್ಕ ಇಬ್ರೂ ಕೂಡಿ ಗುಡೀಗೆ ಹೋಗಿ ಬರೂಣೂ ಅಂತ ಕರದೆ

**ಸುವರ್ಣಾ:**– (ನಗುತ್ತ) ಅಕ್ಕ ! ನಮ್ಮ ಲೈಫೂ ಅಗದೀ ವಿಚಿತ್ರ ಐತಿ ಅಲ್ಲ ?

**ಅರುಂಧತಿ:**– ಯಾಕ ?

**ಸುವರ್ಣಾ:**– ಯಾಕಂತ ಕೇಳ್ತೀಯಲ್ಲಕ್ಕ ! ಎಲ್ಲಾರೂ ಗುಡೀಗೆ ಯಾತಕ್ಕ ಹೋಗ್ತಾರ ?

**ಅರುಂಧತಿ;**– ದೇವರ ದರ್ಶನಕ್ಕ ಹೋಗ್ತಾರ !

**ಸುವರ್ಣಾ:**– ಹೋಗೂ ಮುಂದ ಏನೇ ನೊಯ್ತಾರ ?

**ಅರುಂಧತಿ;**– ಹೂವು–ಕಾಯಿ ಒಯ್ತಾರ, ಯಾಕ ?

**ಸುವರ್ಣಾ;**– ಯಾಕ ಅನ್ನೂದನ್ನ ಆಮ್ಯಾಲ ಹೇಳ್ತೀನಿ. ದೇವರ ದರ್ಶನಕ್ಕೋಗಬೇಕಾದರ ಹೂವು–ಕಾಯಿ ಒಯ್ತಾರ ಹೌದಲ್ಲೋ ?

**ಅರುಂಧತಿ;**– ಹೌದು.

**ಸುವರ್ಣಾ:**– ಹಾಂಗಿದ್ರ ನಾವ್ಯಾತಕ್ಕ ಹೋಗ್ತೀವಿ.

**ಅರುಂಧತಿ:** – (ಮುಗುಳು ನಕ್ಕು ಸುಮ್ಮನಾಗುವಳು.)

**ಸುವರ್ಣಾ;**– ಎಲ್ಲಾರೂ ಹಣ್ಣು- ಹೂವು ಒಯ್ದರ, ನಾವು ದೇವರ ಮ್ಯಾಲಿನ ಹೂ ಕಿ-ತ್ಕೊಂಡು ಮುಡಕೊಳ್ಳಾಕ ಹೋಗ್ತೀವಿ. ಅಲ್ಲ? ಎಷ್ಟು ಮಜಾ ಐತಿ ನೋಡು ನಮ್ದು !

**ಅರುಂಧತಿ:**– ಅವರವರು ಪಡದು ಬಂದದ್ದು ಅನುಭವಿಸಾಕ ಬೇಕಲ್ಲ ! ನಮ್ಮ ಪಾಪಮಾಗ ದೇವರು ಒಂದಸೋದ ಹೂ ತೊಗೊಂಡ ಬರೋ ಬುದ್ಧಿ ಕೊಟ್ಟಿದ್ರ ನಾವ್ಯಾಕ ಹೀಂಗ ಮಾಡತಿದ್ವಿ.

**ಸುವರ್ಣಾ:**– ಹಾಂಗ ಮನಸ್ಸು ಸಣ್ಣದು ಮಾಡಬ್ಯಾಡಕ್ಕ ನಮಗೂ ಒಳ್ಳೇ ಕಾಲ ಬಂದೀತು.

**ಅರುಂಧತಿ:**– ನಮಗ ಒಳ್ಳೇ ಕಾಲ ಬರೂದು, ನಿಮ್ಮಾಮಾಗ ಗಂಡಸ್ತನಾ ಬರೂದು ಒಂದ ಕಾಲಕ್ಕ.

**ಸುವರ್ಣಾ:**– ಹಾಂಗೆಲ್ಲಾ ಅನಬ್ಯಾಡಕ್ಕಾ ! ನಿನ್ನೆ ರಾತ್ರಿ ಮಾಮಾ ಹೇಳ್ತಿದ್ರಿಲ್ಲೇನು ? ಯಾರೋ ಒಬ್ಬರು ಡಾಕ್ಟರದಾರು. ನೆಟ್ಟಗಾಗಕೈತಿ ಅಂದಾರ. ಅವಗ್ನ ನಾಳೆ ಮನೀಗೇ ಕರ್ಕೊಂಡ ಬರ್ತೀನಿ ಅಂತ ಏನೇನೋ ಹೇಳ್ತಿದ್ನಲ್ಲಾ. ಇನ್ನೇನು ಈಗ ಬರಬಹುದು ಕರಕೊಂಡು.

**ಅರುಂಧತಿ:**– ಬರ್ಲಿ ಬಿಡು. ಅವರು ಬರೂದರಾಗ ನಾವು ಸ್ವಲ್ಪ ಗುಡೀಗೆ ಹೋಗಿ ಬರೂಣ.

**ಸುವರ್ಣಾ:**– ನಡೀ ಹಂಗಾರ, ಅಂಥಂಗ ಅವ್ವೇನು ಮಾಡ್ಲಿಕ್ಹತ್ಯಾಳ?

**ಅರುಂಧತಿ:**– ಚಹಾ ಮಾಡ್ತಿರಬೇಕು, ಅಡಗೀಮನಿಯೊಳಗ !

ಇಬ್ಬರೂ ಕೂಡಿ ಹೊರಗೆ ಹೊರಟಿರುವಾಗ ಅಲ್ಲಿಯೇ ಬಿದ್ದಿದ್ದ ಭಾವಚಿತ್ರದ ಕಡೆಗೆ ಸುವರ್ಣಾಳ ದೃಷ್ಟಿ ಹೋಗುವದು, ಆಗ ಅವಳು ಬಾಗಿ ಅದನ್ನು ತೆಗೆದುಕೊಂಡು ಅರುಂಧತಿಯ ಕೈಗೆ ಕೊಡುತ್ತ........

**ಸುವರ್ಣಾ**– ಅಕ್ಕಾ ! ನಿನಗಂತೂ ಮೈಮ್ಯಾಲ ಎಚ್ಚರಾನ ಇಲ್ಲಾ. ಈ ಫೋಟೋ ನೋಡು ಎಲ್ಲಿ ಬಿದ್ದೈತಿ, ಮಾಮಾ ನೋಡಿದ್ದರ ನಿನ್ನ ಗತಿ ಏನಾಗತ್ತಿತ್ತು?

ಅರುಂಧತಿಯು ಭಾವಚಿತ್ರವನ್ನು ನೋಡುತ್ತ ಮತ್ತೆ ಕುರ್ಚಿಯ ಮೇಲೆ ಕುಳಿತುಕೊಳ್ಳುವಳು. ಅವಳು ಆ ಚಿತ್ರವನ್ನು ನೋಡುತ್ತಿರುವಾಗ ಪಕ್ಕದ ಮನೆಯ ರೇಡಿಯೋದಲ್ಲಿ "ಜೋ ಬಾತ ತುಝು ಮೇ ಹೈ ತೇರೀ ತಸ್ವೀರಮೇ ನಹ್ಹೀ!" ಎಂಬ ಹಾಡು ಕೇಳಿ ಬರುವದು. ಆಗ........

**ಅರುಂಧತಿ:**– ಸುವ್ವಿ ! ಆ ರೇಡಿಯೋ ಬಂದ ಮಾಡಂತ ಹೇಳವಾ ಅವರಿಗೆ!

**ಸುವರ್ಣಾ:**– ಶ್ಯಾಣ್ಯಾಕದೀದಿ ಬಿಡು. ನಿನಗ ಕೇಳೂದಾಗೂದಿಲ್ಲಂತ ಅವರು ರೇಡಿಯೋ ಬಂದಮಾಡಬೇಕೇನು ? ಅವರು ರೇಡಿಯೋ ಇಟ್ಟಿರೂದು ತಮ್ಮ ಸಲುವಾಗ್ಯೋ, ಏನ ನಿನ್ನ ಸಲುವಾಗ್ಯೋ?

**ಅರುಂಧತಿ:**– ಒಂದಿಷ್ಟು ಸೌಂಡರಾ ಕಡ್ಮೀ ಮಾಡಂತ ಹೇಳವಾ !

**ಸುವರ್ಣಾ:**– ಅವರಿಗ್ಯಾಕ್ಹೇಳಬೇಕು ? ನಾವs ಗುಡೀಕಡೆ ಹೋಗಿ ಬಿಟ್ರಾತಲ್ಲ ?

ಅರುಂಧತಿ:– ಹುಚ್ಚಿ ! ಹೊರಗ್ಹೋದರ ಈ ಹಾಡು ಕೇಳೂದಿಲ್ಲಾಂತ ತಿಳ್ದಿ ಏನು? ಗುಡೀಗ್ಹೋಗೂದರಾಗ ಐದಾರು ಹೋಟ್ಲು ಹತ್ತಾವು. ಅಲ್ಲೀ ರೇಡಿಯೋದಾಗೂ ಈ ಹಾಡು ಇದ್ದs ಇರತೈತಿ. ಅದಕ್ಕ ಈ ಹಾಡು ಮುಗದ ಮ್ಯಾಲೇ ಹೋಗೂಣು

ಹಾಡು ಮುಗಿಯುವವರೆಗೆ ಅರುಂಧತಿಯು ಭಾವ ಚಿತ್ರವನ್ನು ನೋಡುತ್ತ ಸುಮ್ಮನೆ ಕುಳಿತು ಕೊಳ್ಳುವಳು. ಸುವರ್ಣಳು ಅವಳನ್ನೇ ನೋಡುತ್ತ ನಿಂತು ಕೊಳ್ಳುವಳು. ಹಾಡು ಮುಗಿದೊಡನೆ ಅಕ್ಕ ತಂಗಿಯರಿಬ್ಬರೂ ಹೊರಗೆ ಹೊರಟರಲು ಈಶ್ವರರಾಯನು ಮನೆಯೊಳಗೆ ಪ್ರವೇಶಿಸುವನು. ಹೊರಗೆ ಹೊರಟಿರುವ ಅವರಿಬ್ಬರನ್ನೂ ಸಿಟ್ಟಿನಿಂದ ನೊಡುತ್ತ.....

ಈಶ್ವರರಾಯ:– ಎಲ್ಲಿಗೆ ಹೊರಟೀರಿ ?

ಸುವರ್ಣಾ:– (ಅಂಜುತ್ತ) ಎಲ್ಲಿಗೂ ಇಲ್ಲಮಾವಾ !

ಈಶ್ವರರಾಯರು:– ಮತ್ತ ಸುಳ್ಳ ಬ್ಯಾರೇ ಹೇಳ್ತಿಯೇನು ?

ಅರುಂಧತಿ:– ಗುಡೀಗೆ ಹೊರಟಿದ್ವಿ !

ಈಶ್ವರ:– ಹಲಕಟ್ ರಂಡೆ ! ಗುಡೀಗ್ಹೋಗೂದೊಂದು ಕೇಡು, ನಿನ್ಹಾಲಿಗೆ.

ಅರುಂಧತಿ;– ನೀ ಹೇಳಿಧಂಗ ಕೇಳಿದ್ರ ಹಲಕಟ್ ರಂಡ್ಯಾಗಿ ಆರೋಪ್ಹಾಗ ತಿದ್ವಿ ನಾ ಹಾಂಗಾಗ ಲಿಲ್ಲಾಂತ ತಿಳಿದು ಬಾಯಿಲೆ ಅಂದು ಪ್ರೀತೀ ತೀರಿಸಿಗೊಂತೀ ಏನು ?

ಈಶ್ವರ:– ಮಾಡಿಕೊಂಡ ಗಂಡಗ ಹೀಂಗ ತಿರುಗುತ್ತರಾ ಕೊಡ್ತೀಯಾ !

ಅರುಂಧತಿ:— ಮಾಡಿಕೊಂಡ ಗಂಡಲ್ಲಾ, ತಾಳೀ ಕಟ್ಟಿದ ಗಂಡಾ ಅನ್ನು.

ಈಶ್ವರ: — ಹಾಂಗಂದ್ರ ?

ಅರುಂಧತಿ:– ಮಾಡಿಕೊಂಡ ಗಂಡಾಗಿದ್ರ ಹೆಂಣ್ತಿಗೆ ಏನೂ ಕಡಿಮಿ ಆಗ ಧಾಂಗ ನೋಡಿಕೊಂತಿದ್ದಿ. ನೀ ಬರೇ ತಾಳೀ ಕಟ್ಟಿದ ಗಂಡ.

ಈಶ್ವರ:- ನೀ ಮ್ಯಾಟ್ರಿಕ್ ಪಾಸಾದದ್ದಕ್ಕೂ ಸಾರ್ಥಕಾತು. ಸ್ಕೂಲಿನೊಳಗ ಗಂಡನ ಜೊತೀಲೆ ಹೀಂಗ ವಾದಸೂದನ್ನ ಕಲ್ತಂಗ ಕಾಣಸ್ತದ.

ಅರುಂಧತಿ:- ಇದನ್ನ ಸ್ಕೂಲಿನೊಳಗ ಕಲೀಲಿಲ್ಲ. ನೀನs ಕಲಿಸೀದಿ.

ಈಶ್ವರ:– ಅಂದರ ? ನೀ ನನ್ಮಾತು ಕೇಳಬ್ಯಾಡಾ. ಎದುರುತ್ತರಾ ಕೊಟಗೊಂತ ಹೋಗೂ ಅಂತ ನಾನು ಕಲಿಸೀನೇನು ?

ಅರುಂಧತಿ:- ಮತ್ತಿನ್ಯಾರು ? ಮಾವಾ, ಜಗತ್ತಿನ್ಯಾಗಿನ ಸೋದರಮಾವ ಗೋಳು ಅಕ್ಕನ ಮಕ್ಕಳ್ನ ಪಡಿವ್ಯಾಗತಾರ. ನೀ ತಂಗೀ ಮಗಳ್ನ ಮದ್ವಿ ಮಾಡಿಕೊಂಡಿ. ನೀನು ನನಗ ಚಿಕ್ಕಂದ್ನಿಂದಾ ಜೋಪಾನಾ ಮಾಡೀದಿ, ಅದಕ್ಕ ನಾ ನಿನ್ನ ತಂದೀಗಿಂತ ಹೆಚ್ಚು ಅಂತ ತಿಳದಿದ್ದೆ. ಆದರ ನನ್ನ ಮಾಡಿಕೊಂಡೀನೀ ಅಂತ ಬಂದವರಿಗೆಲ್ಲಾ ಬ್ಯಾಡಂದು ನೀನ ಮಾಡಿಕೊಂಡಿ, ಮಾಡಿಕೊಂಡರಾ ಏನಾತು ? ನಾಲ್ಕು ಜನ ಗೆಳತೇರ್ಹಂಗ ಛಂದಾಗಿ ಬಾಳೇವು ಮಾಡಬೇಕು ಅಂದುಕೊಂಡೆ. ಆದರ ಕೈಲಾಗದ ನೀನು ನನ್ನ ಜೀವನಾ ಹಾಳ ಮಾಡಿಬಿಟ್ಟಿ

ಈಶ್ವರ:– ಅದು ಹೀಂಗಾಗತದ ಅಂತ ನನಗರಾ ಎಲ್ಲಿ ಗೊತ್ತಿತ್ತು ?

ಅರುಂಧತಿ:- ಅಧ್ಯಾಂಗ ಗೊತ್ತಾದೀತು ? ಸಣ್ಣ ಕೂಸು ನೀನು.

ಈಶ್ವರ:– ನೋಡು, ಈಗ ಆದದ್ದಾಗಿ ಹೋಗೇದ, ಆ ಬಗ್ಗೆ ವಾದಾ ಮಾಡಿ ಉಪಯೋಗಿಲ್ಲ. ಅದರೊಳಗss ಸುಧಾರಿಸಿಗೊಂಡ್ಹೋದರ ಆಗೂದಿಲ್ಲೇನು?

ಅರುಂಧತಿ:- ಮಾವಾ ! ನಿನ್ನ ಬಾಯೊಳಗ ಸುಧಾರಿಸಿಗೊಂಡು ಹೋಗೂದು ಅನ್ನೋ ಶಬ್ದಾ ಕೇಳಿದರ ನನಗ ತಡಿಯುಂದಾಗೂದಿಲ್ಲ ಅದನ್ನೊಂದು ಬಿಟ್ಟು ಬ್ಯಾರೇ ಮಾತಾಡು.

ಈಶ್ವರ:– ಹೀಂಗ ಮಾತಾಡೋದ ಸ್ತ್ರೀ ಧರ್ಮೇನು ?

ಅರುಂಧತಿ:- ಇದು ಹ್ಯಾಂಗ ಸ್ತ್ರೀ ಧರ್ಮಾದೀತು? ನೀ ಹೇಳಿದವನ ಜೋತೀಲೆ ಮಲಕೊಂಡಿದ್ರ ಅದು ಸ್ತ್ರೀ ಧರ್ಮಾಗತಿತ್ತು ಅದನ್ನ ನಾ ಒಲ್ಲೆ ಅಂದದ್ದಕ್ಕ ಹಲಕಟ್ ರಂಡ್ಯಾಗೀನಿ, ಅಲ್ಲss ?

ಈಶ್ವರ:– ಭಾಳ ಶಾಣ್ಯಾಕೆದೀದಿ ಸುಮ್ಮನಾಗು.

ಅರುಂಧತಿ:– ಮಾವಾ, ನೀ ಮಾತಾಡಬ್ಯಾಡ. ನಿನ್ನ ಸಲವಾಗಿ ನಾ ಎಷ್ಟು ಕಷ್ಟ ಪಟ್ಟೇ ನನ್ನೊದು ನಿನಗೇನು ಗೊತ್ತದು ? ನೌಕರೀ ಮಾಡಿ ನಿನಗೆ ನೆಟ್ಟಗ ಮಾಡಸ್ತೀನಿ ಅಂದೆ, ನೆಟ್ಟಗಾಗದಿದ್ದರ ಹೋಗ್ಲಿ. ನನ್ನ ದೈವಾನss ಇಷ್ಟಿತ್ತು ಅಂತ ತಿಳಕೊಂಡು ಸಾಯುಊತನಕಾ ನಿನ್ನ ಪಾದ ಪೂಜಾ ಮಾಡಿಕೊಂಡ ಕಾಲಾ ಕಳೀತೀನಿ ಅಂದೆ. ಆದರೂ ನಿನಗ ಬುದ್ದಿ ಬರಲಿಲ್ಲಾ ಇದರಮ್ಯಾಲ ಮತ್ತ ಮೊನ್ನೀ ಪ್ರಕರಣಾ........

ಈಶ್ವರ:– ನೊನ್ನೀ ಪ್ರಕರಣದ ಸುದ್ದೀ ಎತ್ತ ಬ್ಯಾಡಂತ ಎಷ್ಟಸಲ ಹೇಳ ಬೇಕು ? ನೀ ಒಳ್ಳೇ ಮಾತೀಲೇ ಬಾಯಿ ಮುಚ್ಚೊ ಹಂಗ ಕಾಣೂದಿಲ್ಲಾ.

ಅರುಂಧತಿ:– ಅದನ್ನೊಂದು ಕಲ್ತೀದಿ ನೊಡ್ನೀನು. ಹೊಟ್ಟೆ ಉರದು ಮಾತಾಡಿದರ ಬಾಯಿ ಮುಚ್ಚಿಸಿ ಬಿತ್ತೀದಿ. ಅದಕ್ಕೂ ಸುಮನಾಗದಿದ್ರ ನಾಲ್ಕಾರು ದಿವಸ ಏಳಾಕ ಬರಧಂಗ ಹೊಡದು ಬಿಡತೀದಿ. ಮಾನಾ ಇವತ್ತು ಖಂಡಿತವಾಗಿ ಹೇಳಿಬಿಡ್ತೀನಿ. ನೀ ನನ್ನ ಪ್ರಾಣಾ ತೊಗೊಂಡೂ ಸರೀನ, ಆದರ ನಿನ್ಮಾತು ಕೇಳಿ ಕಂಡವರ್ಗುಂತೇಕ ಮಲಗೂದು ನನ್ನಿಂದ ಸಾಧ್ಯಿಲ್ಲ. ಇದು ನನ್ನ ಸಿಧ್ಧಾಂತಾ ಅಂತ ತಿಳಕೊ.

ಈಶ್ವರ:–ನಿಂದಾತಲ್ಲಾ ! ಇವತ್ತು ನಾನೂ ಒಂದು ನಿರ್ಧಾರಕ್ಕ ಬಂದೀನಿ.

ಅರುಂಧತಿ:– ಏನದು, ನಿನ್ನ ನಿರ್ಧಾರಾ ?

ಈಶ್ವರ:– ನೀನು ನೌಕರೀ ಮಾಡಿ ನನಗ ನೆಟ್ಟಗ ಮಾಡಬೇಕಂತೀದಿ ಹೌದಲ್ಲೋ ?

ಅರುಂಧತಿ:–ಹೌದು.

ಈಶ್ವರ:– ಹಾಂಗಿದ್ರ ಈಗ ಅಂಥಾ ಪ್ರಸಂಗಾನ ಬಂದsದ. ನೀ ಏನ್ ಮಾಡತೀ ಅನ್ನೋದನ್ನ ನೋಡಬೇಕಾಗೇದ.

ಅರುಂಧತಿ:– ಅಂದರ ? ನೀ ಹೇಳೂದು ನನಗ ತಿಳೀಲಿಲ್ಲ !

ಈಶ್ವರ:– ನಿನ್ನೆ ರಾತ್ರಿ ನಾ ಹೇಳಿದ್ನಿಲ್ಲ ?

ಅರುಂಧತಿ:– ಏನು ?

ಈಶ್ವರ:— ಡಾಕ್ಟರರ ವಿಷಯ !

ಅರುಂಧತಿ:— ಅದು ಏನು ?

ಈಶ್ವರ:— ಒಬ್ಬ ಡಾಕ್ಟರರು ಸಿಕ್ಕಿದ್ರು, ನನಗ ಗುಣಾ ಆಗ್ತದಂತ ಹೇಳಿದರೂ ಅಂತ ಹೇಳ್ಳಿಲ್ಲೇನು ?

ಅರುಂಧತಿ:— ಹೌದು, ಹೇಳಿದ್ದಿ.

ಈಶ್ವರ:— ಈಗ ಅದs ಡಾಕ್ಟರು ನನಗ ಗುಣಾ ಮಾಡೂದರ ಜೋಡೀಗೆ ನಿನಗ ನೌಕರೀನೂ ಕೊಡ್ತಾರಂತ. ತಿಂಗಳಿಗೆ ನೂರಾ ಐವತ್ತು ರೂಪಾಯಿ ಸಂಬಳಾನೂ ಕೊಡ್ತಾರಂತ.

ಅರುಂಧತಿ:— ಖರೇ ಹೇಳ್ತೀಯಾ ?

ಈಶ್ವರ:— ನಾ ಸುಳ್ಯಾಕ ಹೇಳ್ಲಿ ?

ಅರುಂಧತಿ:— ಹಾಂಗಿದ್ರ ಈಗs ಡಾಕ್ಟರ್ಗುಂತೇಕ ಹೋಗೂಣು

ಈಶ್ವರ:— ನಾವು ಅಲ್ಲಿಗೆ ಹೋಗೂದ್ಯಾತಕ್ಕ ? ಅವರs ಇಲ್ಲಿಗೆ ಬರ್ತೇವೀ ಅಂತ ಹೇಳ್ಯಾರ ಈಗ ಅವರೂ ಬರೋ ಹೊತ್ತಾಗೇದ.

ಅರುಂಧತಿ:— ಹಾಂಗಿದ್ರ ಒಳ್ಳೇದs ಆತಲ್ಲ ! ಇಂಥಾ ಧರ್ಮಾತ್ಮರೂ ಈ ಕಾಲದಾಗದಾರನ್ನೂದನ್ನ ನಂಬೂದs ಕಷ್ಟ !

ಈಶ್ವರ:— ನಿನ್ನ ಕಣ್ಣಾಗ ಎಲ್ಲಾರೂ ಹಂಗs ಕಾಣಸ್ತಾರ.

ಅರುಂಧತಿ:— ಕಾಣಷೂದನ್ನ ನಾಯಾಕ ಹೇಳ್ಲಿ ? ನನಗಾದ ಅನುಭವದ ವ್ಯಾಲಿಂದ ಹೇಳ್ತೀನಿ.

ಈಶ್ವರ:— ಹೋಗಲಿ ಬಿಡು. ಹಿಂದಿಂದೆಲ್ಲಾ ಮರ್ತು ಡಾಕ್ಟರ ಕೂಡ ಛಂದಾಗಿ ಮಾತಾಡು.

ಅರುಂಧತಿ:— ನನಗೇನು ಛಲೋ ರೀತೀಲಿಂದಾ ಬಾಳೂದು ಬ್ಯಾಡಾಗೇದಂತ ತಿಳ್ದೀ ಏನು ?

ಈಶ್ವರ:— ಆಯಿತಲ್ಲಾ ! ಇನ್ನ ಸುಮ್ಮನ ಮಾತಿಗೆ ಮಾತು ಬೆಳಸಬ್ಯಾಡಾ. ಮನೀ ಸ್ವಲ್ಪ ಸ್ವಚ್ಛಮಾಡಿ ನೀನೂ ತಯಾರಾಗು.

ಅರುಂಧತಿ:— ನಾ ತಯಾರಾಗೂದೇನೈತಿ ಗುಡೀಗ್ಹೋಗಿ ಬಂದೇ ಅಂದ್ರ ತಯಾರಾಧಂಗ !

ಈಶ್ವರ:— ಯಾಕ ? ಗುಡೀಗೆ ಹೋಗ್ಲಿಕ್ಕೇ ಬೇಕೇನು ?

ಅರುಂಧತಿ:— ನಾನು ಗುಡೀಗ್ಹೋಗೂದು ಯಾತಕ್ಕಂತ ತಿಳ್ದೀದಿ ?

ಈಶ್ವರ:— ಎಲ್ಲಾರೂ ಯಾತಕ್ಕ ಹೋಗ್ತಾರ, ಅದಕ್ಕs ನೀನೂ ಹೋಗ್ತಿರ ಬೇಕು. ಅದರೊಳಗ ಬ್ಯಾರೇ ಏನದ ?

ಅರುಂಧತಿ:— ನಾವು ಎಲ್ಲಾರೂ ಹೋಗೂವಂಗ ಹೋಗೂದಿಲ್ಲಾ !

ಈಶ್ವರ:— ಅಂದರ ?

ಅರುಂಧತಿ:— ನಾವು ಗುಡೀಗ್ಹೊಗೂದು ಹೂವಿನ ಸಲುವಾಗಿ !

ಈಶ್ವರ:— ಹೂವಿನ ಸಲುವಾಗಿ ?

ಅರುಂಧತಿ:— ಹೌದು ಹೂವಿನ ಸಲುವಾಗಿ ! ಬ್ಯಾರೇಯವರು ಗುಡೀಗ್ಹೋಗಿ ದೇವರಿಗೆ ಹೂ ಏರಿಸಿ ಬರತಾರ, ನಾವಿಬ್ಬರೂ ಹೋಗಿ ಅವನ್ನ ತಕ್ಕೊಂಡು ಮುಡಕೊಂತೀವಿ.

ಈಶ್ವರ:— ಹೂ ಮುಂಡಕೊಂಡರ ಬರೂದರಾ ಏನು ?

ಅರುಂಧತಿ:– ಮಾಮಾ ! ಈ ವಿಷಯದಾಗ ನೀನು ಮಾತಾಡದಿದ್ರ ಛಲೋ ಐತಿ.

ಈಶ್ವರ:— ಯಾಕ ?

ಅರುಂಧತಿ:— ಯಾಕಂದ್ರ, ನಿನಗಿದರಾಗ ತಿಳಿಯೂದಿಲ್ಲಾ !

ಈಶ್ವರ:— ನನಗ್ಯಾಕ ತಿಳಿಯೂದಿಲ್ಲಾ ?

ಅರುಂಧತಿ:– ಹೆಂಗಸರು ಹೂ ಯಾಕ ಮುಡಕೊಂತಾರನ್ನೂದು ಗಂಡಸರಿಗೆ ಗೊತ್ತಾಗತೈತಿ. ನೀನು ಗಂಡೂ ಅಲ್ಲ, ಹೆಣ್ಣೂ ಅಲ್ಲ, ಅಂದಾಗ ನಿನ ಗ್ಹ್ಯಾಂಗ ಗೊತ್ತಾಗಬೇಕು ?

ಈಶ್ವರ:– ಮತ್ತ ನಾಲಗೀ ಸಡ್ಲ ಬಿಟ್ಟೀನ್ನೀದು ?

ಅರುಂಧತಿ:– ನೀನs ಬಿಡಾಕ್ಹತ್ತೀದಿ. ಅದಕ್ಕ ನಾನೇನ್ಮಾಡ್ಲಿ ?

ಈಶ್ವರ:– ಆಯಿತು. ಗುಡಿಗೇರಾ ಹೋಗು, ಮತ್ತೆಲ್ಲಿಗೆರಾ ಹಾಳಾಗಿ ಹೋಗು. ಅವರ ವಾಕ್ಟರು ಬರೂದರಾಗ ಲಗೂನs ಬಾ, ಆಯ್ತು.

ಅರುಂಧತಿ:– ಲಗೂ ಬರೂದು ಹ್ಯಾಂಗ ಸಾಧ್ಯ ?

ಈಶ್ವರ:– ಯಾಕ

ಅರುಂಧತಿ:– ಅದs ನಿನಗ ತಿಳಿಯೂದಿಲ್ಲಾ, ಅನ್ನೂದು.

ಈಶ್ವರ:– ಅಂದರ ?

ಅರುಂಧತಿ:– ಅಂದರ, ಗುಡಿಯಾಗ ಮಂದಿದ್ದಾಗ ಹೂ ತಗಿಯೂದು ಹ್ಯಾಂಗ ಸಾಧ್ಯ ? ಎಲ್ಲಾರೂ ಹೋಗೊತನಕಾ ಕುಂತು ಆ ಮ್ಯಾಲ ತರಬೇಕಾಗತೈತಿ. ಅದಕ್ಕs ಸ್ವಲ್ಪ ತಡಾ ಅಂತ ಹೇಳಿದ್ದು.

ಈಶ್ವರ:– ಹಾಳಾಗಿ ಹೋಗು.

ಅರುಂಧತಿಯು ಸುವರ್ಣಳನ್ನು ಕರೆದುಕೊಂಡು ಹೊರಗೆ ಹೋಗುವಳು. ಆಕೆಯು ಹೋದನಂತರ ಈಶ್ವರರಾಯನು ಅಡುಗೆ ಮನೆಯ ಬಾಗಿಲಿಗೆ ಹೋಗಿ........

ಈಶ್ವರ:– ಗಂಗೂs !

ಗಂಗೂಬಾಯಿ:– (ಒಳಗಿನಿಂದಲೇ) ಏನಣ್ಣಾ !

ಈಶ್ವರ:– ಏನ್ಮಾಡ್ಲಿಕ್ಹತ್ತೀದಿ ?

ಗಂಗೂ:– (ಒಳಗಿನಿಂದಲೇ) ಚಹಾಕಿಟ್ಟೇನಣ್ಣಾ ! ಏನು ಕೆಲಸಿತ್ತು ?

ಈಶ್ವರ:- ಏನೂ ಇಲ್ಲಾ. ಈಗ ಡಾಕ್ಟರು ಬರವರಿದ್ದಾರ. ಅವರು ಬಂದ ಕೂಡ್ಲೆ ನೀನು ಸುವರ್ಣಾನ್ನ ಕರ್ಕೊಂಡು ಸ್ವಲ್ಪ ಪ್ಯಾಟ್ಯಾಗ ಹೋಗಿ ಬಾ!

ಗಂಗೂ:- ಆಗಲೆಣ್ಣಾ! ಆದರ........

ಈಶ್ವರ:- ಯಾಕS, ಸುಮ್ನ ಆದೆಲ್ಲಾ! ನೀ ಏನ ಕೇಳಬೇಕಂತೀದಿ?

ಗಂಗೂ:- ಏನೂ ಇಲ್ಲ, ಡಾಕ್ಟರ ಮುಂದಕೂತ್ಲೆ ಸುವರ್ಣಾನ್ನ ಕರ್ಕೊಂಡು ಪ್ಯಾಟ್ಯಾಗ್ಹೋಗುವೆಲ್ಲಾ ಮನ್ಯಾಗ ಮತ್ತೇನರಾ ಗಡಿಬಿಡಿ ಆಗೂ ಹಾಂಗೈತೇನು?

ಈಶ್ವರ:- ಅವನ್ನ ತೊಗೊಂಡು ನಿನಗೇನು ಮಾಡಬೇಕಾಗೇದ? ಹೇಳಿದಷ್ಟು ಕೇಳೂದು ನಿನ್ನ ಕೆಲಸ. ಅವನ್ನ ಬಿಟ್ಟು ಇಲ್ಲದ ಉಪದ್ವ್ಯಾಪಿತನಾ ಮಾಡಬ್ಯಾಡ. ಐಲೀ ಕಡೆ ನಿನಗೂ ನಿನ್ನ ಮಗಳ ಗಾಳಿ ಬತಧಾಂಗ ಕಾಣಸ್ತದ.

ಗಂಗೂ:- ಹಾಂಗೇನಿಲ್ಲಣ್ಣಾ! ನಿನ್ನ ಬಾಳೇವು ಸುರಳೀತ ನಡವರ ಸಾಕೂಂತ ಬಾಯಿ ಮುಚಿಕೊಂಡು ಸುಮ್ನ ಕುಂತಿಲ್ಲ, ಇಷ್ಟದಿನಾ!

ಈಶ್ವರ:- ಇಷ್ಟ ದಿನಾ ಹ್ಯಾಂಗ ಸುಮ್ನ ಇದ್ದಿ ನೋಡು, ಹಾಂಗ ಇನ್ನ ಮುಂದೂನು ಗಪ್ಪಿದ್ದುಬಿಡು.

ಗಂಗೂ:- ಅಂದ್ರ? ಇನ್ನ ವಕ್ಯಾಲ ಎಲ್ಲಾರೂ ಮನೀಗೇ ಬರ್ತಾರೇನು?

ಈಶ್ವರ:- ಮತ್ತೇನು ಮಾಡೂದು? ನಿಮ್ಮಗಳು ನಾ ಕಳಿಸಿದಲ್ಲಿಗೆ ಹೋಗದಾ ಕೂಳ್ತಿರತಾಳಲ್ಲ. ಅಲ್ಲS ಇನ್ನೇನು ಅಂಥಾ ಪ್ರಸಂಗಾನೂ ಬರೂ ಹಾಂಗ ಕಾಣಸೂದಿಲ್ಲಾ.

ಗಂಗೂ:- ಯಾಕ?

ಈಶ್ವರ:- ಡಾಕ್ಟರು ರಾತ್ರಿ ಕೆರತ್ತಿಂದುನಾರ ಹೀಂಗೆ! ಅವರS ಸ್ವಲ್ಪ ಪರಿಚಯ ಆದರ ಛಲೋ ಅಂತ ತಿಳಿದು ನಾವS ಮನೀಗೆ ಬರ್ಲಿಕ್ಕೆ ಹೇಳೀನಿ ಅನರಿ. ನೀನೂ ಸುವರ್ಣಾ ಮನಿಯೊಳಗಿದ್ದರ ಮಾತಾಡ್ಲಿಕ್ಕೆ ಅನುಕೂಲಾಗೂದಿಲ್ಲಾಂತ ತಿಳದS ಪ್ಯಾಟಿಗ್ಹೋಗ್ಲಿಕ್ಕೆ ಹೇಳಿದ್ದು.

ಗಂಗೂ:- ನನಗ್ಯಾಕೊ ಇದೆಲ್ಲಾ ಸರೀ ಕಾಣೂದಿಲ್ಲಣ್ಣಾ!

ಈಶ್ವರ:- ನಾ ಆಗಲೇ ಹೇಳ್ಲಿಲ್ಲ, ಹೇಳಿದಷ್ಟು ಕೇಳಿಕೊಂಡು ಸುಮ್ಮ

ರೂ ಅಂತ: ನಿನ್ನಗಳು ಮಾಡಿಕೊಂಡ ಗಂಡಗs ತಿರಿಗಿ ಬಿಡ್ಡಾ ಳಂದವ್ಯಾಲ, ನೀನು ಒಡಹುಟ್ಟಿದ ಅಣ್ಣಗ ಎದುರುತ್ತಿ ಕೊಡೂ ದೇನು ದೊಡ್ಡಾತಲ್ಲಾ !

ಗಂಗೂ:- ಹೋಗ್ಲಿ ಬಿಡಣ್ಣಾ ! ನಿನಗ ಹ್ಯಾಂಗ ತಿಳೀತದಸೋ ಹಾಂಗ ಮಾಡು.

ಈಶ್ವರ:- ಅಷ್ಟರಂದು ಸುಮ್ಮಾಗು. (ಅದೇ ಸಮ ... ಐವತ್ತು ವಯಸ್ಸಿನ ಡಾಕ್ಟರರು ಬಾಗಿಲ ಬಳಿ ಬಂದು ನಿಂತುಕೊಂಡದ್ದನ್ನು ಕಂಡು) ಓ! ಡಾಕ್ಟರರೇ! (ಎಂದು ಬಾಗಿಲ ಬಳಿಗೆ ಹೋಗಿ ಅವ ರನ್ನು ಒಳಗೆ ಕರೆದುಕೊಂಡು ಬಂದು ಕುರ್ಚಿಯೊಂದನ್ನು ತೋರಿಸಿ) ಇಲ್ಲಿಯೇ ಕುಳಿತುಕೊಳ್ಳಿರಿ. ಬಡವರ ಮನೆ. ದಯವಿಟ್ಟು ಸಂಕೋಚ ಮಾಡಿಕೊಳ್ಳಬಾರದು

ಡಾಕ್ಟರ:- (ಕುರ್ಚಿಯ ಮೇಲೆ ಕುಳಿತುಕೊಳ್ಳುತ್ತ) ಪರವಿಲ್ಲ, ಪರವಿಲ್ಲ: ನಾನು ಬರುವದು ತಡವಾಗಲಿಲ್ಲವಷ್ಟೇ? (ಎಂದು ನುಡಿದು ಮನೆಯು ತುಂಬೆಲ್ಲ ದೃಷ್ಟಿ ಹಾಯಿಸುವನು)

ಈಶ್ವರ:- ನಿಮ್ಮಂಥ ದೊಡ್ಡವರು ನಮ್ಮ ಮನೆಯ ವರೆಗೆ ಬಂದದ್ದೇ ದೊಡ್ಡದು ಅಂದಾಗ ತಡವೇನು ಬಂತು?

ಡಾಕ್ಟರ:- ಜಗತ್ತಿನೊಳಗ ದೊಡ್ಡವರ್ಯಾರು, ಸಣ್ಣವರ್ಯಾರು? ಎಲ್ಲಾ ತಿಳ ಕೊಂಡ್ಹಾಂಗಿರ್ತದ ಈಶ್ವರಾಯೇ!

ಈಶ್ವರ:- ಹಾಂಗಂದರ ಹ್ಯಾಂಗರೀ! ನಿಮ್ಮಷ್ಟು ದೊಡ್ಡ ಮನಸ್ಸಿನವರು ಎಲ್ಲಿ ಸಿಗ್ತಾರ?

ಡಾಕ್ಟರ:- ಅದೆಲ್ಲಾ ಹೋಗಲಿ. (ಮೆಲ್ಲನೆ, ಕೈಸೊನ್ನೆಯಿಂದ) ನಿಮ್ಮನೆ ಯವರೆಲ್ಲಿದ್ದಾರೆ?

ಈಶ್ವರ:- (ಅವರ ಬಳಿ ಹೋಗಿ ಕಿವಿಯ ಹತ್ತಿರ ಬಾಯಿ ಒಯ್ದು) ಗುಡಿಗೆ ಹೋಗಿದ್ದಾಳೆ. (ಅದೇ ಸಮಯಕ್ಕೆ ಅರುಂಧತಿಯು ಸುವರ್ಣಳೊಂದಿಗೆ ಮನೆಯೊಳಗೆ ಪ್ರವೇಶಿಸುವಳು. ಇಬ್ಬರ ತಲೆತುಂಬ ಹೂಗಳಿವೆ.) ಬಾ, ಅರುಂಧತಿ ಇವರೇ ಡಾಕ್ಟರರು; ಡಾಕ್ಟರರೇ! ಇವಳೇ ನನ್ನ ಪತ್ನಿ ಅರುಂಧತಿ! (ಸುವರ್ಣಳತ್ತ ಕೈಮಾಡಿ) ಈಕೆ ಅರುಂಧತಿಯ ತಂಗಿ ಸುವರ್ಣಾ, ಎಸ್ಸೆಸ್ಸೆಲ್ಸಿಗೆ ಓದುತ್ತಿದ್ದಾಳೆ.

(ಡಾಕ್ಟರ, ಅರುಂಧತಿ ಹಾಗು ಸುವರ್ಣಾ ಮೂವರೂ ಪರಸ್ಪರರಿಗೆ ವಂದಿಸುವರು. ಡಾಕ್ಟರರು ಅರುಂಧತಿಯನ್ನು ಅಪಾದ ಮಸ್ತಕ ವೀಕ್ಷಿಸುತ್ತಿರುವಾಗ....)

ಈಶ್ವರ;– ಗಂಗೂs ! ಸುವರ್ಣಾ ಬಂದಾಳ್ನೋಡು.

ಗಂಗೂಬಾಯಿ:- (ಒಳಗಿನಿಂದಲೇ) ಸುವರ್ಣಾ ಒಳಗ ಬಾ ಇಲ್ಲಿ.

(ಸುವರ್ಣಳು ಅಡುಗೆ ಮನೆಯೊಳಗೆ ಹೋಗುತ್ತಲೆ....)

ಈಶ್ವರ:– ಗಂಗೂs ! ಹಿತ್ತಲ ಬಾಗಲದಿಂದಾನs ಹೋಗಿಬಿಡ್ರಿ.

(ಡಾಕ್ಟರರು ತನ್ನನ್ನು ಹಾಗೆ ನೋಡುತ್ತಿರುವುದು ಹಾಗು ಈಶ್ವರ ರಾಯನು ತನ್ನ ತಂಗಿ ಹಾಗು ತಾಯಿಯನ್ನು ಹಿತ್ತಲ ಬಾಗಿಲಿನಿಂದ ಹೊರಗೆ ಕಳಿಸಿದ್ದನ್ನು ಕಂಡು ಏನೂ ತಿಳಿಯದಂತಾಗಿ ಅರುಂಧತಿಯು ಅಡುಗೆಯ ಮನೆಕಡೆಗೊಮ್ಮೆ ಈಶ್ವರರಾಯ ನನ್ನೊಮ್ಮೆ ನೋಡುತ್ತ ನಿಂತುಕೊಳ್ಳುವಳು ಆಗ–)

ಈಶ್ವರ:– ಅರುಂಧತಿ ! ಹಾಂಗ್ಯಾಕ ನಿಂತುಕೊಂಡಿ ? ಇಲ್ಲೆ ಈ ಕಡೆಗೆ ಏನಾದರೂ ಹಾಸಿಕೊಂಡು ಕೂತುಕೋ.

ಅರುಂಧತಿ:– ಹ್ಞಾ (ಎಂದು ನುಡಿದು ಡಾಕ್ಟರರು ಕುಳಿತುಕೊಂಡ ಕುರ್ಚಿ ಗೆದುರಾಗಿ ಹಾಸಿಕೊಂಡು ಕುಳಿತುಕೊಳ್ಳುವಳು) ಅವ್ವ ಎಲ್ಹೋಗ್ಯಾದ್ಲ ?

ಈಶ್ವರ:– ಸ್ವಲ್ಪ ಕೆಲಸಿತ್ತು ಅದಕs ಶ್ಯಾಟ್ಯಾಗ ಕಳಿಸಿದೆ.

ಅರುಂಧತಿ:– ಮನೀಗೆ ಇಂಥಾ ದೊಡ್ಡ ಮನುಷ್ಯರು ಬಂದಾಗ ಅವರ್ನ ಹೊರಗ ಕಳಸಬಾರದಾಗಿತ್ತು.

ಈಶ್ವರ:– ಅದೇನಡ್ಡೀ ಇಲ್ಲಾ. ಇಲ್ಲಿ ಅವರ ಕೆಲಸರಾ ಏನೈತಿ ?

ಡಾಕ್ಟರ:– ಹೌದು, ನನ್ನುತ್ರ ನೌಕರೀ ಮಾಡೂವಾಕಿ ನೀನು, ಅವರದೇನು ಕೆಲಸದs.

ಅರುಂಧತಿ:– ಅದೂ ಖರೇನ ಅಂಧಾಂಗ, ಡಾಕ್ಟರರೇ ! ನಮ್ಮ ಯಜಮಾನರಿಗೆ ಗುಣವಾಗುತ್ತದೆಯೇ ?

ಡಾಕ್ಟರ:— ಆ ಬಗ್ಗೆ ನೀನು ಸಂಶಯ ತಾಳುವುದೇಬೇಡ. (ಎಂದು ನುಡಿದು ಈಶ್ವರರಾಯನ ಕಡೆಗೆ ನೋಡುವನು) ನಿಮಗೆ ಮೊದಲೇ ಹೇಳಿರಲಿಲ್ಲವೇ ರಾಯರೆ ?

**ಈಶ್ವರ:**– ಹೌದೌದು ಆ ಮಾತನ್ನು ನಾನು ನಿನ್ನೆ ರಾತ್ರಿಯೇ ಇವಳಿಗೆ ಹೇಳಿದ್ದೇನೆ. (ಏನನ್ನೋ ಜ್ಞಾಪಿಸಿಕೊಂಡು) ಅಂದಹಾಗೆ ನೀವು ಯಾವ ಸಿಗರೇಟು ಸೇದುತ್ತೀರಿ ?

**ಡಾಕ್ಟರ:**– ಪ್ಲೇಯರ್ಸ !

**ಈಶ್ವರ:**– ಸರಿ ಐದು ನಿಮಿಷಗಳಲ್ಲಿ ತರುತ್ತೇನೆ. (ಅರುಂಧತಿಗೆ) ಅರುಂಧತಿ ! ನಿನ್ನ ತಾಯಿ ಚಹಾ ಮಾಡಿಟ್ಟಾಳ, ಒಂದು ಕಪ್ಪು ಡಾಕ್ಟರರಿಗೆ ಕೊಡು. ಅವರು ಚಹಾ ಕುಡಿಯೂದರೊಳಗs ಬಂದು ಬಿಡತೇನಿ.

ಎಂದು ನುಡಿದು ಆಕೆಯಿಂದ ಉತ್ತರವನ್ನು ನಿರೀಕ್ಷಿಸದೆ ಹೊರಟು ಬಿಡುವನು. ಅರುಂಧತಿಗೆ ದಿಕ್ಕೇತೋಚದಂತಾಗುವದು. ಆದರೂ ಅವಳು ಗಾಂಭೀರ್ಯವನ್ನು ತಂದುಕೊಂಡು ಅಡುಗೆ ಮನೆಯ ಕಡೆಗೆ ಹೋಗುತ್ತಿರುವಾಗ ಡಾಕ್ಟರರು ಎದ್ದುಹೋಗಿ ತಲೆ ಬಾಗಿಲನ್ನು ಮುಚ್ಚುವರು ಅದನ್ನು ಕಂಡು ಅರುಂಧತಿಯು ಅಡುಗೆ ಮನೆಯೊಳಗೆ ಹೋಗುವದನ್ನು ಬಿಟ್ಟು....)

**ಅರುಂಧತಿ:**– ಏನು ಡಾಕ್ಟರೇ ? ನಿಮ್ಮೈಯೊಳಗ ಆರಾಮುದನೋ ಇಲ್ಲೋ ?

**ಡಾಕ್ಟರ:**- ಯಾಕ ?

**ಅರುಂಧತಿ:**- ನೀವು ಸಾಬೀತಾಗಿ ಮನೀ ಸೇರಬೇಕಂತೀರೋ ಅಥವಾ ಮೈಯೊಳಗಿನ ಎಲುವು ಮುರಿಸಿಕೊಂಡು ಹೋಗಬೇಕಂತೀರೋ.

**ಡಾಕ್ಟರ:**– ಹುಚ್ಚರ್ಹಾಂಗ ಮಾತಾಡಬ್ಯಾಡಾ. ನಿನ್ನ ಗಂಡನs ಒಪ್ಪಿ ಕಟ್ಕೊಂಡು ಬಂದಾನ, ತಿಳೀತಿಲ್ಲೋ ?

**ಅರುಂಧತಿ:**– ನನಗಂಡ ಒಪ್ಪಿದ್ರ ಅವನ್ನs ಕರಕೊಂಡು ಬಾಗಲಾ ಮುಚಿಗೋಳ್ರಿ. ನನ್ಹಂತೇಕ ಬರಬ್ಯಾಡ್ರಿ. ನನಗ ಮೊದಲs ಸಂಶಯ ಬಂದಿತ್ತು ಈಗ ಎಲ್ಲಾ ತಿಳಧಾಂಗಾತು, ನಿಮ್ಮ ನೌಕರೀನೂ ಬ್ಯಾಡಾ. ನೀವೂ ಬ್ಯಾಡಾ, ಸುಮ್ನ ಇಲ್ಲಿಂದಾ ಎದ್ದ ಹೋಗ್ರಿ,

**ಡಾಕ್ಟರ:**– ಎದ್ದು ಹೋಗಾಕ ಫುಕಟ ಬಂದಿಲ್ಲಾ. ನಿನ್ನ ಗಂಡಗ ಕೈತುಂಬ ರುಪಾಯಿ ಕೊಟ್ಟೇನಿ.

**ಅರುಂಧತಿ:**– ಕೊಟ್ರ, ಅವನ್ಹಂತೇಕ ಇಸಗೊಳ್ರಿ, ನನ್ನ ಸಮೀಪಕ್ಕ ಬಂದ್ರ ನೆಟ್ಟಗಾಗಲಿಕ್ಕಿಲ್ಲ.

**ಡಾಕ್ಟರ:**– ಅವ್ಹರಂತೇಕ ಇಸಗೊಳ್ಳಾಕ ನಾನೇನವಗೆ ಕೈಗಡಾ ಕೊಟ್ಟಿಲ್ಲ.

ನಿನ್ನ ಸಲುವಾಗೇ ಕೊಟ್ಟೇನಿ. ಅದು ಹೋಗ್ಲಿ, ನಿನ್ನ ಗಂಡಂತೂ ನಿನಗ ಮುಟ್ಟಿಲ್ಲ. ನನಗೂ ದೂರಿದೂ ಅಂತೇದಿ. ಹಿಂಗs ಎಷ್ಟು ದಿನಾ ಇರೂವಾಕಿ ನೀನು?

**ಅರುಂಧತಿ:**— ಸಾಯೂತನಕಾ ಇರ್ತೇನಿ. ಅದಿಗ್ಲಿ ಡಾಕ್ಟರೇ! ಇದs ಈಗ ನೀವs ಹೇಳಿದಿರಲ್ಲ. ನನ್ನ ಗಂಡ ನೆಟ್ಟಗಾಗತಾನಂತ.

**ಡಾಕ್ಟರ:**– ಅವ್ನಾ ನೆಟ್ಟಗಾಗೂದೂ, ನನಗ ತಾರುಣ್ಯ ಬರೂದೂ ಒಂದs ಕಾಲಕ್ಕ.

**ಅರುಂಧತಿ:**— ಹಾಂಗಿದ್ರ, ನನ್ಮುಂದ ನಮ್ಮಾವನ ಮುಂದ ಸುಳ್ಯಾಕ ಹೇಳಿದಿರಿ?

**ಡಾಕ್ಟರ:**– ನಿನ್ನ ಗಂಡನ ಮುಂದ ಇದ್ದ ಸಂಗತಿ ಹೇಳೇನಿ, ನಿನ್ಮುಂದ ಸುಳ್ಳು ಹೇಳ್ಲಿಕ್ಕೆ ಅವನೇ ಹೇಳಿದ. ಅದಕ್ಕೇ ನಾ ಹೇಳಿದ್ದು.

**ಅರುಂಧತಿ:**— ಡಾಕ್ಟರರೇ! ನನ್ನ ಗಂಡಂತೂ ಎಲ್ಲಾ ಬಿಟ್ಟು ನಿಂತಾನ. ಕನಿಷ್ಟ ನಿಮಗಂತಾ ಬುದ್ಧಿ ಬರಬಾರದೇನು?

**ಡಾಕ್ಟರ:**— ಈಗ ನಾನು ಮಾಡೀರೋ ಬುದ್ಧಿಗೇಡಿ ಕೆಲಸರಾ ಯಾವದು?

**ಅರುಂಧತಿ:**– ಇದಕ್ಕಿಂತಾ ಹೆಚ್ಚಿನ ಬುದ್ಧಿಗೇಡಿತನಾನೂ ಐತೇನ?

**ಡಾಕ್ಟರ:**— ಆಗೀರೂದಾದರೂ ಏನೀಗ?

**ಅರುಂಧತಿ:**– ನೀವು ಐವತ್ತು ದಾಟಿದ ಮುದುಕರು. ನನ್ನಂಥವಳನ್ನು ನಿಮ್ಮಂಥವ್ರಾ ಹ್ಯಾಂಗ ಬಯಸ್ತು?

**ಡಾಕ್ಟರ:**– ಯಾಕ? ಅದರೊಳಗೇನೈತಿ? ಹೆಣ್ಣೂ ಅಂದ್ರ ನೋಟಿದ್ಧಂಗ.

**ಅರುಂಧತಿ:**– ಅಂದ್ರ?

**ಡಾಕ್ಟರ:**— ಅಂದರಿಷ್ಟು! ಹೆಣ್ಣೂ ಅಂದ್ರ. ನಡಿಯೋ ನೋಟಿದ್ಧಂಗ. ನೋಟು ಹಳೇದ ಇರ್ಲಿ, ಹೊಸಾದs ಇರ್ಲಿ. ಯಾರು ಬೇಕಾದವರು ನಡಸಬಹುದು. ಯಾಕ, ಮುದುಕರು ಹೊಸಾ ನೋಟು ನಡಸಬಾರದೂ ಅಂತ ಕಾಯ್ದೇ ಏನರಾ ಅದs ಏನು?

**ಅರುಂಧತಿ:**– ನಿಮ್ಮಂತ ಭಂಡರಿಗೆ ಕಾಯ್ದೇ ಒಂದು ಕೇಡು. ನೀವು ಒಳ್ಳೇ ಮಾತೀಲೆ ಇಲ್ಲಿಂದಾ ಹೋದರ ಭಲೋ ಆತು. ಇಲ್ಲದಿದ್ರ........

**ಡಾಕ್ಟರ:**– ಏನ್ಮಾಡ್ತೀದಿ?

ಅರುಂಧತಿ:— ತೋರಿಸ್ತೀನಿ ತಡಿ.

ಎಂದು ನುಡಿದು ಬಾಗಿಲ ಕಡೆಗೆ ಹೋಗತೊಡಗುವಳು. ಡಾಕ್ಟರರು ಮುಂದೆ ಹೋಗಿ ಆಕೆಯ ಕೈಹಿಡಿದು ಜಗ್ಗುವಷ್ಟರಲ್ಲಿ ಬಾಗಿಲು ಬಡಿದ ಸದ್ದಾಗುವದು. ಆಗ—

ಡಾಕ್ಟರ:— ಒಳ್ರಿ, ಈಶ್ವರರಾಯರ! ನಿಮ್ಮ ಪತ್ನಿ ಬಾಯಿಗೆ ಬಂಧಂಗ ಬಯ್ಲಿಕ್ಹತ್ತ್ಯಾಳೆ. (ಎಂದು ನುಡಿಯುತ್ತ ಬಾಗಿಲು ತೆರೆಯುವನು. ಇವನು ಬಾಗಿಲು ತೆರೆಯುವದೇ ತಡ, ಬಾಗಿಲು ನೂಕಿಕೊಂಡು ರಮಾಕಾಂತ, ಚಂದ್ರಶೇಖರ ಮತ್ತು ಸುಮಾರು ಇಪ್ಪತ್ತು-ಇಪ್ಪತ್ತೆರಡು ವಯಸ್ಸಿನ ಪ್ರಮೀಳಾ-ರಮಾಕಾಂತನ ತಂಗಿ—ಮೂವರೂ ಮನೆಯೊಳಗೆ ಪ್ರವೇಶಿಸುವರು. ಪ್ರಮೀಳೆಯನ್ನು ನೋಡಿದೊಡನೆ ಅರುಂಧತಿಯು ಡಾಕ್ಟರನಿಂದ ಕೈಬಿಡಿಸಿಕೊಂಡು 'ಪಮ್ಮೀ' ಎಂದು ಅವಳಿಗೆ ತೆಕ್ಕೆ ಬೀಳುವಳು. ಡಾಕ್ಟರರು ಏನೂ ತಿಳಿಯದಂತಾಗಿ ನಿಂತಲ್ಲಿಯೇ ನಿಂತು ಬಿಡುವರು. ಅವರ ಪರಿಸ್ಥಿತಿಯನ್ನು ಕಂಡು—

ರಮಾಕಾಂತ:— ಯಾಕ ಡಾಕ್ಟರೇ! ಇಲ್ಲಿ ನಿಮ್ಮಾಟ ನಡೀಲಿಲ್ಲಂತ ಕಾಣತೈತಿ. ನಿಮಗಾಗಿರೋ ವಯಸ್ಸು ಒಂದು ಕತ್ತೆಗಾಗಿದ್ದರ ಅದೂ ಪಾವನಾಗಿ ಬಿಡ್ತಿತ್ತು. ಥೂ! ನಿಮ್ಮಂಥವರು ಬದುಕಬಾರ್ದು ವಿಷಾ ಕುಡದು ಯಾಕ ಸಾಯಬಾರ್ದು ನೀವು?

ಚಂದ್ರಶೇಖರ:— ಇಂಥಾ ಭಂಡರು ವಿಷಾ ಕುಡುದು ಸಾಯ್ತಾರೇನೋ? ಬ್ಯಾರೇಯವರಿಗೆ ವಿಷಾ ಹಾಕಿ ಕೊಲ್ಲೋ ತಾಯಿಗ್ಗಂಡರಿವರು!

ಡಾಕ್ಟರ:— (ಸ್ವಲ್ಪ ಸಾವರಿಸಿಕೊಂಡು) ನೀವಿಲ್ಲಿಗೆ ಯಾಕ ಬಂದ್ರಿ? ನಿಮಗ ಬಾ ಅಂತ ಹೇಳಿದವರ್ಯಾರು? ಪರವಾನಗೀ ಇಲ್ದ, ಎರಡನೇಯವರ ಮನೀಯೊಳಗ ಪ್ರವೇಶ ಮಾಡೂದು ಎಂಥಾ ಅಪರಾಧಾಗತದ ಅನ್ನೂದು ಗೊತ್ತದನೋ ಇಲ್ಲೋ?

ರಮಾಕಾಂತ:— ಅದು ನನಗ ಗೊತ್ತೈತ್ರೀ ಡಾಕ್ಟರ! ನೀವ್ಯಾರ ಪರವಾನಗೀ ತೊಗೊಂಡು ಇಂಥಾ ಹಲಕಟ್ ಕೆಲಸಾ ನಡ್ಸೀರಿ?

ಡಾಕ್ಟರ:— ನೋಡು ರಮಾಕಾಂತ ಬಾಯಿಗೆ ಬಂಧಂಗ ಮಾತಾಡಬ್ಯಾಡ. ಈಕೀ ಗಂಡನ ಪರವಾನಗೀ ತೊಗೊಂಡs ನಾ ಇಲ್ಲಿಗೆ ಬಂದೀನಿ.

ಚಂದ್ರಶೇಖರ:– ನಿಮಗ ಯಾರು ಪರವಾನಗೀ ಕೊಟ್ಟಾರೋ, ಅವರಮ್ಯಾಲ ತೋರಿಸ್ರೀ ನಿಮ್ಮ ಗಂಡಸ್ತನಾನ. ಪಾಪ, ಹೆಂಗಸರ ಮ್ಯಾಲ ತೋರ ಸೂದರೊಳಗ ಏನರ್ಥೈತಿ ?

ಡಾಕ್ಟರ:— ಈಗ ನಾನು ದುಡ್ಡು ಕೊಟ್ಟೀರೂದು ಈಕಿ ಸಲುವಾಗಿ; ಅವನ ಸಲುವಾಗೆಲ್ಲಾ, ತಿಳೀತಿಲ್ಲೋ ?

ರಮಾಕಾಂತ:— ಡಾಕ್ಟರರೇ ! ಮನೆಯೊಳಗ ನಿಮ್ಮ ಹೆಂಡತಿ ಇದಾಳಿಲ್ಲ ?

ಡಾಕ್ಟರ:— ಹೌದು ಇದ್ದಾಳೆ.

ರಮಾಕಾಂತ:– ವಯುಸ್ಸಿನೊಳಗ ಅರುಂಧತೀಗಿಂತಾ ದೊಡ್ಡ ಮಗಳೂ ಆದಾಳ.

ಡಾಕ್ಟರಃ— ಹೌದು.

ರಮಾಕಾಂತ:— ಹೀಂಗಿದ್ದೂ ನಿಮಗ ಈ ವಯುಸ್ಸಿನ್ಯಾಗ ಇಷ್ಟು ಚಪಲ ಐತೇನು ?

ಡಾಕ್ಟರಃ– ಅದು ನನ್ನಿಷ್ಟ, ನನ್ನ ಕೇಳ್ಲಿಕ್ಕೆ ನೀನ್ಯಾರು ?

ರಮಾಕಾಂತಃ– ಡಾಕ್ಟರ ! ಏಕ ವಚನದೊಳಗ ಮಾತಾಡಾಕ ನನಗೂ ಬರ ತೈತಿ. ನೀ ಒಬ್ಬ ದೊಡ್ಡ ಮನಶ್ಯಾ ಅಂತ ತಿಳದು ಇಷ್ಟೊತ್ತನಕಾ ಮರ್ಯಾದಿಕೊಟ್ಟು ಮಾತಾಡಿದೆ............

ಚಂದ್ರಶೇಖರ:— ಇಂಥಾ ಹಲಕಟ್ ಗೋಳಿಗೆಲ್ಲಾ ದೊಡ್ಡ ಮನಶ್ಯಾರಂತ ತಿಳೀತೀ ಏನೋ ನೀನು ?

ರಮಾಕಾಂತ:— ಚಂದ್ರೂ ನಿನಗ ತಿಳಿಯೂದಿಲ್ಲಾ. ಕೆಲವುಸಲ ಇಂಥವರ ಗುಣಕ್ಕ ಬೆಲೀ ಕೊಡದಿದ್ರೂ ವಯುಸ್ಸಿಗರಾ ಕೊಡಬೇಕಾಗತೈತಿ.

ಚಂದ್ರಶೇಖರ:– ಹೀಂಗಾದರ ಮುಗಧೋತು. ನೀನು ದೀನ ಅಬಲೆಯರ ಉದ್ಧಾರಾ ಮಾಡಿಧಗಾತು.

ಡಾಕ್ಟರ:– ರಮಾಕಾಂತ ನಿನ್ನ ರಗಳೀ ಕೇಳ್ಲಿಕ್ಕೆ ನನಗ ಪುರಸೊತ್ತಿಲ್ಲ. ನೀವು ಒಳ್ಳೇ ಮಾತ್ನಿಂದ ಹೊರಗ್ಹೋಗ್ತೀರೋ, ಇಲ್ಲೋ ?

ರಮಾಕಾಂತ.– ಅವನ್ನs ನಾನು ನಿನಗ ಕೇಳಬೇಕಾಗೇತಿ.

ಡಾಕ್ಟರ:– ಸೋಡು. ನೀನು ನನ್ನ ತಾಳ್ಮೀ ಪರೀಕ್ಷಾ ಮಾಡಾಕ್ಹತ್ತೀದಿ ಛಲೋ ಮಾತೀಲೇ ಇಲ್ಲಿಂದ ಹೊರಗ್ಹೋಗು.

**ಅರುಂಧತಿ:**– ನನ್ನೊಬ್ಬಾಕೀನ ಬಿಟ್ಟು ಹೋಗಬ್ಯಾಡ್ರೀ. ನಿಮ್ಮ ಕಾಲಿಗೆ ಬೀಳ್ತೀನಿ. (ಎಂದು ಚಂದ್ರಶೇಖರ, ರಮಾಕಾಂತರತ್ತ ನೋಡುವಳು. ಅನಂತರ ಪ್ರಮೀಳೆಗೆ) ಪಮ್ಮೀ, ನೀನರೆ ಹೇಳಽ ನಿಮ್ಮಣ್ಣಾ ಅವರಿಗೆ.

**ರಮಾಕಾಂತ:**– ಈ ಮಾತ್ನ ಪ್ರಮೀಳಾ ಹೇಳೋ ಕಾರಣಾನಽ ಇಲ್ತಂಗೀ. ನನ್ನ ತಂಗೀ ಗೆಳತಿ ನೀನು, ನನಗೂ ತಂಗೀನ ಆಗಬೇಕು. ಇಲ್ಲಿ ನಿಂತಾನಲ್ಲ ಚಂದ್ರಶೇಖರ, ಇವತ್ನಿಂದ ಇವನೂ ನಿನಗ ಅಣ್ಣಾಗಬೇಕು. ಇನ್ಮ್ಯಾಲ ನಿನಗ ಇಬ್ರು ಅಣ್ಣಾಗೋಳಿದಾರನ್ನೋದನ್ನ ಮರೀಬ್ಯಾಡ. ಅದು ಹೋಗಲಿ. (ಡಾಕ್ಟರರ ಕಡೆಗೆ ತಿರುಗಿ) ಯಾಕಪಾ ಡಾಕ್ಟರ, ಇನ್ನೂ ಇಲ್ಲೇ ನಿಂತಿಯಲ್ಲೋ, ಹೊರಬೀಳೂದಿಲ್ಲೇನು?

**ಡಾಕ್ಟರ:**– ನಿಮ್ಮಂಥವರಿಗೆ ಹೆದರಿ ಹೊರಬೀಳಾಕ ನಾ ಏನು ಅಂಜುಬರುಕ ಅಂತ ತಿಳ್ದೀರೇನು?

**ರಮಾಕಾಂತ:**– ನೀ ಯಾಕ ಅಂಜಬುರಕ ಆದೀಯಪಾ, ಸಿಂಧೂರ ಲಕ್ಷ್ಮಣನ ತುಂಡು ನೀನು.

**ಚಂದ್ರಶೇಖರ:**– ಏನೋ ರಮಾಕಾಂತ, ಅಂಥಾ ಪುಣ್ಯಾತ್ಮನ್ನ ಇಂಥಾ ಲಫಂಗಗ ಹೋಲಸ್ತೀಯಾ?

**ರಮಾಕಾಂತ:**– ಹಾಂಗೇನಿಲ್ಲಪಾ, ಇವ್ನಾ ಅಂಜುಬುರಕಲ್ಲಾ ಅಂತ ಅಂದ, ಅದಕ್ಕ ಹಾಂಗ್ಹೇಳಿದೆ. ಅಂಥಂಗ, ಡಾಕ್ಟರ ಅಸಹಾಯ ಅಬಲೆಯರ ಮ್ಯಾಲ ಬಲಾತ್ಕಾರಾ ಮಾಡಾಕ ನಿನ್ನ ಮನಸ್ಸಿಗೇನೂ ಅನಸೂದಽ ಇಲ್ಲೇನು?

**ಡಾಕ್ಟರ:**– ಅನಸೂದಿಲ್ಲಾ, ಯಾಕನಸಬೇಕು?

**ಚಂದ್ರಶೇಖರ:**– ಹಾಂಗಿದ್ರ ಪರಸ್ತ್ರೀಯರ ಮ್ಯಾಗ್ಯಾಕ ಬಲಾತ್ಕಾರಾ ಮಾಡ್ತೀರಿ. ಮನ್ಯಾಗ ನಿಮ್ಮಗಳಽ ಅದಾಳ ಆಕೀಮ್ಯಾಲೇ ಮಾಡ್ರೆಲ್ಲಾ!

**ಡಾಕ್ಟರ:**– ನೀವಿಬ್ಬರೂ ಒಳ್ಳೇ ಮಾತೀಲೇ ಬಾಯಿ ಮುಚ್ತೀರೋ ಇಲ್ಲೋ?

**ರಮಾಕಾಂತ:**– ನೀ ಬಾಯಿಮುಚ್ಚು. ಬಾಯೊಳಗ ಉಳಿದಿರೋ ನಾಲ್ಕಾರು ಹಲ್ಲುಗಳು ಉದುರಿ ಕೆಳಗ ಬೀಳಬಾರದು, ಅಂತ ನಿನ್ನಿಚ್ಛಾ ಇದ್ರ ಇಲ್ಲಿಂದ ಸುಮ್ನ ಹೋಗಿ ಬಿಡು.

ಡಾಕ್ಟರ:- ಆಗಲಿ, ಈಗಂತೂ ಹೋಗ್ತೇನಿ. ಈ ಅಣ್ಣಾ-ತಂಗೇರ ನಾಟಕಾ ಎಷ್ಟು ದಿನಾ ನಡೀತೈತಿ ಅನ್ನೋದನ್ನ ನಾನೂ ನೋಡ್ತೇನಿ. (ಎಂದು ನುಡಿದು ದುರ್ದಾನ ಕೆಗೆದುಕೊಂಡವರಂತೆ ಹೊರಗೆ ಹೋಗುವನು)

ಅರುಂಧತಿ:- ಅಣ್ಣಾ! ನೀವಿಬ್ಬರೂ ಒಳ್ಳೇ ಟಾಯಿಮಿಗೆ ಬಂದು ನನ್ನ ಮರ್ಯಾದೀ ಉಳಿಸಿರಿ. ನೀವು ಬಂದಿರದಿದ್ರ ಇವತ್ತು ನನ್ನಗತಿ ಏನಾ ಗತಿತ್ತೋ, ಏನೋ?

ರಮಾಕಾಂತ:- ಆಗೋದೇನು ದೇವರು ಎದುರಿಸೋ ಶಕ್ತಿ ನಿನಗೂ ಕೊಟ್ಟಾನೆ ಎದರಸ್ತಿದ್ದಿ.

ಅರುಂಧತಿ:- ಎಲ್ಲೀವರೆಗಂತ ಎದರಸಬೇಕು? ಮೊದ್ಲಿನ್ಹಾಂಗಾಗಿದ್ರ ಸಾಯೂತನಕಾ ಎದರಸ್ತಿದ್ದೆ. ಅದರ ಮೊನ್ನೀ ಪ್ರಕರಣಾ ನಡದಾಗ ಸಿಂದ ನನಗ ಬಧಕೂದ ಬ್ಯಾಡಾಗೇತಿ.

ರಮಾಕಾಂತ:— ಆ ಸುದ್ದೀನ ತಗೀಬ್ಯಾಡವಾ. ಅದನ್ನ ಕೇಳಿದರ ನನ್ನ ಮೈಯೆಲ್ಲಾ ಉರಧೋಗತೈತಿ. ಪಾಪ, ಆವರೂ ಹುಚ್ಚರಾಂಗ ತಿಂಗಾಳ ತ್ಯಾರ. ಇಷ್ಟಾದಮ್ಯಾಗರಾ ನಿನ್ನ ಗಂಡಗ ಬುದ್ಧಿ ಬಂದಿರ್ಬೇತೂ ಅಂತ ತಿಳ್ದಿದ್ದೆ.

ಪ್ರಮೀಲಾ:- ಈಕಿಯು ಗಳಿಕಿ ತಿನಬೇಕೂ ಅಂತ ಇಷ್ಟೆಲ್ಲಾ ಮಾಡಿದವಗ ಬುದ್ಧಿ ಬರ್ತೈತೇನಣ್ಣಾ!

ಅರುಂಧತಿ:— ಆದಿರಲಣ್ಣಾ! ನೀವು ಆಕಸ್ಮಾತ್ತಾಗಿ ಹೇಳಿಕಳಿಸಿಧಂಗ ಇಲ್ಲಿಗೆ ಬಂದು ಬಿಟ್ರಿಲ್ಲಾ, ಅದs ನನಗ ಆಶ್ಚರ್ಯ.

ಚಂದ್ರಶೇಖರ:- ತಂಗೀ! ನಾವು ಆಕಸ್ಮಾತ್ತಾಗಿ ಇಲ್ಲಿಗೆ ಬಂದಿಲ್ಲ. ಇಲ್ಲಿ ಹಿಂಗಾಗತೈತಿ. ಅನ್ನೂದು ಗೊತ್ತಿದ್ದs ಬಂದೀವಿ.

ಅರುಂಧತಿ:- ಅಂದ್ರ? ಇವತ್ತು ಡಾಕ್ಟರು ನಮ್ಮನೀಗೆ ಬರ್ತಾರನ್ನೂದು ನಿಮಗ ಗೊತ್ತಿತ್ತೇನು?

ರಮಾಕಾಂತ:- ಹೌದು.

ಅರುಂಧತಿ:— ಅದು ಹ್ಯಾಂಗ.

ಪ್ರಮೀಲಾ:- ಅದನ್ನ ನಾ ಹೇಳ್ತೇನಿ ಕೇಳು. ನಿಂದು ಮೊನ್ನೆ ಆ ಪ್ರಕರಣ ಆದಾಗಿನಿಂದ ನಿನ್ನ ಕಾಯಬೇಕೂ ಅಂತ, ನಾನೂ ಅಣ್ಣಾ ನಿರ್ಧಾರಾ

ಮಾಡಿದಿ. ಅವ್ನಿಂದಾ ನಾನು ನಿನ್ಮ್ಯಾಲಿ, ಅಣ್ಣಾ ನಿನ್ನ ಗಂಡನ ಮ್ಯಾಲೆ ಕಣ್ಣಿಟ್ಟಿದ್ವಿ.

ಅರುಂಧತಿ:— ಹ್ಞಾ ಹೀಂಗೇನು ! ಅಂತೂ ನನಗs ಗೊತ್ತಿಲ್ಲ್ಧಾಂಗ ನನ್ನ ಕಾಯಮ ಕೆಲಸಾ ನಡದೈತಿ ಅಂಧಂಗಾತಲ್ಲಾ !

ಪ್ರಮೀಲಾ:- ಹೌದು, ವಂತ್ತೆ ! ನಿನ್ನೆ ಸಂಜೀಮುಂದ ಅಣ್ಣಾ ಮತ್ತು ಶೇಖರಣ್ಣಾ ಇಬ್ರುಕೂಡಿ ಎಲ್ಲಿಗೋ ಹೊರಟಾಗ ನಿನಗಂಡ ಡಾಕ್ಟರರ ಕೂಡ ಮಾತಾಡಿಕೊಂಡ ಹೊರಟದ್ದು ನೋಡಿದರಂತ ಅವರಿಬ್ಬರೂ ಹೋಟಲ್ಲಿನೊಳಗ್ಹೋಗಿ ಸ್ಪೇಶಲ್ ರೂಮಿನ್ಯಾಗ ಕೂತು ಮಾತಾಡಿದರಂತ ಇದನ್ನ ಇವರಿಬ್ರೂ ಪಕ್ಕದ ರೂಮಿನ್ಯಾಗ ಕುಂತು ಕೇಳಿಕೊಂಡಾರ

ಅರುಂಧತಿ:— ಹೋಟಲ್ಲಿನ್ಯಾಗ ಏನೇನು ಮಾತಾಡಿದರಂತ ?

ಪ್ರಮೀಲಾ:- ಅದs ಇವತ್ತು ನಡಿಯೋ ವಿಚಾರಾ, ಡಾಕ್ಟರು ಬಂದಕೂಡೆ ಸುವರ್ಣಾನ್ನ ಮತ್ತು ನಿಮ್ಮವ್ವನ್ನ ಪ್ಯಾಟಿಗೆ ಕಳಸೂದು. ಆ ಮ್ಯಾಲೆ ತಾನು ಸಿಗರೇಟು ತರಾಕಂತ ಹೊರಗ್ಹೋಗಿ ಬಿಡೋದು.

ಅರುಂಧತಿ:- ಹ್ಞಾ ! ಇಷ್ಟೆಲ್ಲಾ ಪ್ಲ್ಯಾನು ಮೊದಲ್ನಿಂದಾ ಹಾಕ್ಯಾರ ಅಂಧಂಗಾತಲ್ಲಾ !

ರಮಾಕಾಂತ:— ಹೌದು, ತಂಗೀ ! ಅದಕ್ಕs ಇವತ್ತು ಹತ್ತು ಗಂಟೇಕ ಇಲ್ಲಿಗೆ ಬಂದು ಯಾರಿಗೂ ಗೊತ್ತಾಗಧಂಗ ಕುಂತಿದ್ವಿ. ನಾವಿಬ್ಬರs ಹೋದರ ಛಲೋ ಅಲ್ಲಾ, ಜೋತೀಗೆ ಒಬ್ಬಾಕಿ ಹೆಣ್ಮಗಳೂ ಇರ್ಲಿ ಅಂತ ಪ್ರಮೀಲಾನ್ನ ಕರ್ಕೊಂಡ ಬಂದ್ವಿ. ನಿಮ್ಮವ್ವ ಹೊರಗ್ಹೋದದ್ದನ್ನೂ ನೋಡಿದಿವಿ. ನಿನಗಂಡ ಹೋಗೂದನ್ನೂ ನೋಡಿದಿವಿ. ಆ ಮ್ಯಾಲ ಡಾಕ್ಟರು ಬಾಗಲಾ ಹಾಕೂದನ್ನ ಕಂಡು ಬಾಗಲದ ಹಂತೇಕ ನಿಂತಕೊಂಡ್ವಿ. ನೀಯಾವಾಗ ಡಾಕ್ಟರಿಗೆ "ತೋರಿಸ್ತೀನಿ ತಡೀ" ಅಂತ ಹೇಳ್ದಿಲ್ಲಾ, ಆವಾಗ ಬಾಗಲಾ ಬಡದಿವಿ.

ಅರುಂಧತಿ:— ಮಾಮಾ ಹೊರಗ್ಹೋದದ್ದು ನೋಡಿದಕೂಡ್ಲೆ ನೀವ್ಯಾಕ ಬಂದು ಬಿಡಬಾರದಾಗಿತ್ತು ?

ಪ್ರಮೀಲಾ:— ಡಾಕ್ಟರು ಎಷ್ಟು ದೂರದತನಕಾ ಕೈಚಾಚಬಹುದು ಅನ್ನೂದನ್ನ ನೋಡಬೇಕಾಗಿತ್ತು. ಅದಕs ಹೊರಗ ನಿಂತಿದ್ವಿ.

**ಅರುಂಧತಿ:**– ಅದೇನs ಇರ್ಲಿ ನೀವು ಒಳ್ಳೇ ಟಾಯಿಮಿಗೆ ಬಂದು ನನ್ನ ಮರ್ಯಾದೀ ಉಳಿಸಿದಿರಿ. ಇದನ್ನ ನಾ ಎಂದೆಂದಿಗೂ ಮರಿಯೂದಿಲ್ಲಾ!

**ರಮಾಕಾಂತ:**– ತಂಗೀ ಮರ್ಯಾದೀನ, ಅಣ್ಣ ಉಳಿಸೋದೇನೂ ದೊಡ್ಡ ಮಾತಲ್ಲ. ನಾ ಆಗಲೇ ಹೇಳಿದ್ನೆಲ್ಲ, ಇನ್ಮ್ಯಾಲೆ ಭಯಪಡಬ್ಯಾಡಾಂತ. ಇಬ್ರು ಅಣ್ಣಗೂಳು ಇರೂವಾಗ ನೀಯಾಕ ಹೆದರ್ತೀದಿ?

**ಅರುಂಧತಿ:**– ಅಣ್ಣಾ! ನಿಮ್ಮಿಬ್ಬರಿಗೂ ದೇವರು ನನ್ನ ಆಯುಷ್ಯಾನೂ ಕೊಡ್ಲೀಂತ ಬೇಡಿಕೊಂತೀನಿ. ಇನ್ಮ್ಯಾಲೆ ಈ ತಂಗೀನ ಮರೀಬ್ಯಾಡ್ರಿ.

(ಎಂದು ಇಬ್ಬರ ಕಾಲಿಗೂ ಬೀಳುವಳು)

**ರಮಾಕಾಂತ:**– ನೀನು ಅಷ್ಟೇನೂ ಮನಸ್ಸಿಗೆ ಹಚ್ಚಿಗೋಬ್ಯಾಡ ತಂಗೀ! ದೇವರು ನಿನಗೂ ಒಳ್ಳೇಕಾಲಾ ತಂದಾನು.

**ಅರುಂಧತಿ:**– ನನಗಿನ್ನ ಒಳ್ಳೇಕಾಲ ಬರೂದು ಸತ್ತಮ್ಯಾಲೇನ. ಅವರ್ಹಂತೇಕ ದ್ದಾಗ ನನ್ನ ಬಾಳೇವು ಸುಧಾರಿಸಿತೂ ಅಂದ್ಕೊಂಡಿದ್ದೆ. ಆದರೆ ಈಗ....

**ರಮಾಕಾಂತ:**– ಹಗಲೆಲ್ಲಾ ಅವರ ವಿಷಯ ತಗೀಬ್ಯಾಡವಾ. ನನ್ನ ಮನಸ್ಸಿಗೆ ಭಾಳ ನೋವಾಗತೈತಿ. ಕನಿಷ್ಟ ನೀನರಾ ಅವರ್ನ ಮರಿಯಾಕ ಪ್ರಯತ್ನಾ ಮಾಡವಾ.

**ಅರುಂಧತಿ:**– ಅಂದ್ರ?

**ರಮಾಕಾಂತ:**– ತಂಗೀ! ಅವರಂತೂ ನಿನ್ನ ಮುಖಾ ನೋಡೂವಷ್ಟು ಸಾಧ್ಯಾsನ ಇಲ್ಲಾ.

**ಅರುಂಧತಿ:** ಅವರು ನಿನಗ ಭೆಟ್ಟ್ಯಾಗಿದ್ರೇನಣ್ಣಾ?

**ರಮಾಕಾಂತ:**— ಹೌದವ್ವಾ; ಅವರ ಸ್ಥಿತೀ ನೋಡಿದಮ್ಯಾಲ ಭೆಟ್ಟ್ಯಾಗ ದಿದ್ರs ಛಲೋ ಇತ್ತೇನೋ ಅಂತ ಅನಸ್ತೈತಿ.

**ಅರುಂಧತಿ:**– ಯಾಕಣ್ಣಾ?

**ರಮಾಕಾಂತ:**- ಇನ್ನೇನವಾ! ಈಗ ಅವರು ಹಗಲೀ ರಾತ್ರಿ ಕೂಡೀ ಕುಡಿ ಕ್ಹತ್ಯಾರ. ಬರಿಯೂದನ್ನೂ ನಿಲ್ಲಿಸ್ಯಾರ, ನೀವು ಹಿಂಗ್ಯಾಕ ಮಾಡ್ತೀರಿ. ಬರೀಲಿಕ್ಕೆ ಸುರೂ ಮಾಡ್ರೀ ಅಂತಂದ್ರ, "ಏನು ಬರೀಲಿ ರಮಾ ಕಾಂತಾ! ಬರೀಲಿಕ್ಕೆ ಕೂತರ ಆಕೀನ ಎದುರಿಗೆ ಬಂದು ನಿಂತ್ಹಂಗಾಗ ತೈತಿ. ನಾ ಏನಾರೆ ಮಾಡಬೇಕೂ ಅಂದರ ಆಕೀ ನೆನಪs ಬರ್ತೈತಿ.

ಅದಕ್ಕs, ಆಕೀನ್ನ ಮರಿಯೂದಕ್ಕಂತ ಕುಡಿಯಾಕ್ಹತ್ತೀನಿ. ನಾ ಕುಡಿಯೋದು ಆಕೀಗೆ ಸೇರ್ತಿದ್ದಿಲ್ಲಾ. ಆಕೀ ಮಾತು ಕೇಳಿ ಕುಡಿಯೂದನ್ನ ಕಡಿಮೀನೂ ಮಾಡಿದ್ದೆ. ಆದರ ಈಗ ಆಕೀ ಸಲುವಾಗೇ ಮತ್ತೆ ಕುಡೀಬೇಕಾಗೇತಿ. ನಾನು ಸಾಯುತನಕಾನೂ ಕುಡೀತೀನಿ ರಮಾಕಾಂತಾ, ಸಾಯೂತನಕಾ ಕುಡೀತೀನಿ. " ಅಂತಂದ್ರು.

**ಅರುಂಧತಿ:**– ಅವರ ಪರಿಸ್ಥಿತಿ ಹಾಂಗಿರೂವಾಗ ನಾನು ಅವರ್ನ ಹ್ಯಾಂಗ ಮರೀಬೇಕ್ರಣ್ಣಾ ! ನನಗಂತೂ ಮನಿಯೊಳಗ ತಾಯಿ ಅದಾಳ, ತಂಗೇರದಾರ, ಹ್ಯಾಂಗರಾ ದಿನಾ ಕಳೀತೀನಿ. ಅವರ್ನ ದೇವರs ಕಾಪಾಡಬೇಕ್ರಣ್ಣಾ, ದೇವರs ಕಾಪಾಡಬೇಕು. (ಅಳುವಳು.)

**ಪ್ರಮೀಲಾ:**– ಹೋಗಲಿ ಬಿಡಣ್ಣ ನೀ ಯಾವ ಸುದ್ದೀ ತಕ್ಕೊಂಡು ಕುಂತಿ ? ನೀನೂ ಅಳಬ್ಯಾಡs ಅರುಂಧತಿ.

**ಚಂದ್ರಶೇಖರ:**– ಹೌದು, ತಂಗಿ ! ಈಗ ಅತ್ತು ಉಪಯೋಗಿಲ್ಲ. ಟಾಯಿಂ. ಹ್ಯಾಂಗ ಬರ್ತೈತಿ, ಹಾಂಗ ನಡದರಾತು.

**ಪ್ರಮೀಲಾ:**– ಹೌದು ಅತಗೊಂತ ಕುಂತ್ರ ಏನೂ ಆಗೂದಿಲ್ಲಾ. ಬಾದದು ಬರ್ಲೀ ಅಂತ ಧೈರ್ಯದಿಂದ ನಿಲ್ಲಬೇಕು.

**ಅರುಂಧತಿ:**– (ಸೆರಗಿನಿಂದ ಕಣ್ಣೊರೆಸಿಕೊಳ್ಳುತ್ತ) ಹೌದು. ಪಮ್ಮೀ ! ಈಗ ನಸ್ಗ ಬಂದದ್ದ ಬರ್ಲೀ ಅನ್ನೋ ಕಾಲಾನs ಬಂದೈತಿ. ಅದು ಹೋಗಲಿ ಸಿಗರೇಟು ತರ್ಲಿಕ್ಕಂತ ಹೋದ ಮಾಮಾ ಇನ್ನೂ ಬರ್ಲಿಲ್ಲಲ್ಲ ?

**ರಮಾಕಾಂತ:**– ಹುಚ್ಚಿ ! ಅವ್ನಾ ಈಗs ಎಲ್ಲಿ ಬರ್ತಾನ. ಮಧ್ಯಾಹ್ನ ಎರಡು ಘಂಟೇದ ಮ್ಯಾಲ ಬಂದರ್ ನಿನ್ನ ಪುಣ್ಯಾ.

**ಅರುಂಧತಿ:**– ಹೀಂಗೇನು ? ಆಗ್ಲಿ ! ಇವತ್ತು ಅವ್ನಾ ಮನಿಗೆಶಾ ಬರ್ಲಿ !

**ಪ್ರಮೀಲಾ:**– ನೀನು ಅವನ ಕೂಡ ಜಗಳಾ ತಗೀಲಿಕ್ಕೆ ಹೋಗಬ್ಯಾಡಾ ಡಾಕ್ಟರಿಗೆ ಹೀಂಗಾದ ಸುದ್ದಿ ತಿಳೀತೂ ಅಂದ್ರ ಅವನs ಜಗಳಾ ತಗಿ ಬಹುದು. ಅದ್ಕs ನೀನು ಸುಮ್ನ ಇದ್ದು ಬಿಡು.

**ಅರುಂಧತಿ:**– ಆಗಲೆವಾ.

**ಚಂದ್ರಶೇಖರ:**– ನೀ ಏನ ಹೆದರಬ್ಯಾಡ ತಂಗೀ ! ನಾವಿಬ್ಬರೂ ನಿನ್ನ ನೆರಳಿನ್ಹಾಂಗ ನೋಡಿಕೊಂಡು ಹೋಗ್ತೀವಿ. ನನಗೂ ಹೊತ್ತಾಗತೈತಿ. ಇನ್ನ ಬರ್ತೀವೆವಾ !

**ಅರುಂಧತಿ:**– ಆಗಲೆಣ್ಣಾ ! ಏ ಪಮ್ಮಿ !

**ಪ್ರಮೀಲಾ:**– ಎಷ್ಣ ?

**ಅರುಂಧತಿ:**– ಸಂಜೀಮುಂದ ಸ್ವಲ್ಪ ಮನೀಕಡೆ ಬರ್ತೀಯಾ ?

**ಪ್ರಮೀಲಾ:**- ಯಾಕ ?

**ಅರುಂಧತಿ:**– ಇವತ್ತು ಗಾಂಧೀ ಮೈದಾನದಾಗ "ಭ್ರಷ್ಟಾಚಾರವನ್ನ ಹೇಗೆ ನಿರ್ಮೂಲ ಮಾಡಬೇಕು." ಅನ್ನೂದರ ಮ್ಯಾಲ ದೇಶಪಾಂಡೆ ವಕೀಲರು ಭಾಷಣಾ ಮಾಡವರದಾರ. ಅಲ್ಲೆ ನಾನು ಸುವರ್ಣಾ ಕೂಡಿ ಸ್ವಾಗತ ಗೀತೆ ಹಾಡಬೇಕಂತ. ಅದಕ್ಹೋಗೇಬೇಕಾಗೇತಿ.

**ರಮಾಕಾಂತ:**– ಯಾವ ದೇಶಪಾಂಡೇ ವಕೀಲರು ? ರೇಡಿಯೋ–ಗೀಡಿಯೋಕ್ಕ ನಾಟಕಾ ಬರೀತಿರತಾರಲ್ಲಾ, ಅವರು ಅಲ್ಲ ಹೌದಲ್ಲೆ ಮತ್ತ ?

**ಅರುಂಧತಿ:**– ಅವರs ಅಣ್ಣಾ ! ನಾನು ಹೋದೊರ್ಷ 'ಜಯವಂತಿ' ಆಫೀಸಿನ್ಯಾಗ ಪ್ರೂಫರೀಡಿಂಗಿಗೇ ಅಂತ ಇದ್ನೆಲ್ಲಾ ಅವಾಗ ಅವರ ಪರಿಚಯಾ ಆಗೇತಿ. ಅವರು ಭಾಳ ಒಳ್ಳೇಯವರು. ಇವರ ಹಿರೇ ಮಗ ಮಿಲ್ಟ್ರೀಯೊಳಗ ದೊಡ್ಡ ಆಫೀಸರದಾನಂತ !

**ರಮಾಕಾಂತ:**– ಗೊತ್ತಾತು ಬಿಡು. ಅವರ ಸಲುವಾಗಿ ನೀ ಹೆಚ್ಚಿಗೆ ಹೇಳೂ ಕಾರಣಿಲ್ಲ. ಸಂಜೀಮುಂದ ಪ್ರಮೀಲಾ ಬೇಕಾದರ ಇಲ್ಲಿಗೆ ಬರವಳ್ಯಾಕ ಭಾಷಣಾ ಕೇಳಾಕ ಮಾತ್ರ ತಾವಿಬ್ರೂ ಅಲ್ಲಿಗೇ ಬರ್ತೀವಿ.

**ಅರುಂಧತಿ:**– ಆಗಲೆಣ್ಣಾ ! ಅಂಥಾಗ, ಅಪರೂಪಕ್ಕ ಮನೀಗೆ ಬಂದ್ರಿ. ನಿಮ್ಮನ್ನ ಹಂಗs ಕಳಿಸಬೇಕಾತು. ಅಪ್ಪಾ ಚಹಾ ಮಾಡಿಟ್ಟು ಹೋಗಿದ್ಲು ಈ ಗಡಿಬಿಡ್ಯಾಗ ಅದೂ ತಣ್ಣಗಾಗಿರಬೇಕು. ಸ್ವಲ್ಪ ಕುಂತ್ಗೋಳ್ರೆಣ್ಣಾ, ಬಿಸೀ ಮಾಡಿ ಕೊಡ್ತೇನಿ.

**ರಮಾಕಾಂತ:**– ಬ್ಯಾಡವಾ, ಮತ್ಯಾವಾಗರೆ ಕುಡಿಯೂಣಂತ, ನಡೀ ಪ್ರಮೀಲಾ ಹೋಗೋಣು.

**ಪ್ರಮೀಲಾ:**– ನಡಿಯಣ್ಣ.

**ರಮಾಕಾಂತ:**- ಸಂಜೀಮುಂದ ಬರೂದನ್ನ ಮರಿಬ್ಯಾಡs ಪಮ್ಮೀ.

**ಪ್ರಮೀಲಾ:**– ಬರ್ತೇನೇಳs. ನಾನ್ಯಾಕ ಮರೀಲಿ ?

**ಅರುಂಧತಿ:**- ಬರ್ತೀನಣ್ಣಾ ನಮಸ್ಕಾರ! (ಎಂದು ಇಬ್ಬರಿಗೂ ನಮಸ್ಕರಿಸುವಳು ಅವರೀರ್ವರೂ ವಂದಿಸಿ ಪ್ರಮೀಳೆಯೊಂದಿಗೆ ಹೋಗುವರು)

## ದೃಶ್ಯ: ೪ ಬೀದಿ

ಸಂಜೆ ಐದು ಗಂಟೆಯ ಸಮಯ. ಸುಮಾರು ಅರುವತ್ತರ ಹೊಸ್ತಿಲಲ್ಲಿ ಕಾಲಿರಿಸಿದ ವಕೀಲರು. ನಲವತ್ತು ವಯಸ್ಸಿನ ಕಾಂಗ್ರೆಸ್ ಆಫೀಸಿನ ಸೆಕ್ರೆಟರಿಯೊಂದಿಗೆ ಪ್ರವೇಶಿಸುವರು.

**ವಕೀಲ:**- ಏನಪಾ, ಮೀಟಿಂಗಿನ ಆರೇಂಜ್‌ಮೆಂಟ ಚೆನ್ನಾಗಿ ಮಾಡೀದ್ಯೋ ಇಲ್ಲೋ ?

**ಸೆಕ್ರೆಟರಿ:**— ನಿಮ್ಮ ಭಾಷಣಾ ಅಂದಮ್ಯಾಲ ಕೇಳೋದದ ಏನರೀ ? ಎಲ್ಲಾ ವ್ಯವಸ್ಥಾನೂ ಮಾಡೀನಿ ಪಬ್ಲಿಸಿಟಿನಂತೂ ಹಾಯಕ್ಲಾಸ್ ಮಾಡೀನಿ.

**ವಕೀಲ:**- ಪಬ್ಲಿಸಿಟೀನಂತೂ ಮಾಡೇಮಾಡ್ತೀದಿ ಬಿಡು. ಅದನ್ನಲ್ಲ ನಾ ಕೇಳಿದ್ದು !

**ಸೆಕ್ರೆಟರಿ:**- ಮತ್ಯಾವುದು ವಕೀಲರೇ ?

**ವಕೀಲ:**- ಭಾಷಣ ಮುಗಿದಮ್ಯಾಲಿನ ಆರೆಂಜಮೆಂಟಪಾ !

**ಸೆಕ್ರೆಟರಿ:**- ಅಂದ್ರ ? ನೀವೂ ಕುಡೀತೀರೇನ್ರಿ ?

**ವಕೀಲ:**— ಕುಡಿಯೂದಲ್ಲೋ !

**ಸೆಕ್ರೆಟರಿ:**- ಮತ್ಯಾವದರೀ ಹಾಂಗಿದ್ರ

**ವಕೀಲ:**- ನೀ ಎಂಥಾ ಸೆಕ್ರೆಟರೀನೋ ? ಯಾರ್ಯಾರಿಗೆ ಏನೇನು ಬೇಕಾಗತಾವು ಅನ್ನೋದು ಗೊತ್ತಿರದಿದ್ರ ಹ್ಯಾಂಗಪಾ

**ಸೆಕ್ರೆಟರಿ:**— ಅದs ನನಗೂ ತಿಳೀಧಾಂಗಾಗೇದರೀ

**ವಕೀಲ:**- ಬಾಯಿ ಬಿಟ್ಟs ಹೇಳಬೇಕಂತೀಯೇನು ?

**ಸೆಕ್ರೆಟರಿ:**- ಎಲ್ಲಾ ಬಿಟ್ಟೀರಂದಮ್ಯಾಲ ಬಾಯಿಬಿಡಾಕ ಯಾಕ ಹಿಂದ ಮುಂದ ನೋಡ್ತೀರಿ, ವಕೀಲರs ?

**ವಕೀಲ:**- ನೋಡಪಾ ! ಹೊಸಾ ಮಾಲು ಸಿಗದಾ ಭಾಳ ದಿವಸಾದವು. ಅದಕ್ಕ ಭಾಷಣ ಮುಗಿಯೂದರಾಗ ಯಾವದರಾ ಒಂದು ವ್ಯವಸ್ಥಾ ಮಾಡಲ್ಲ !

**ಸೆಕ್ರೆಟರಿ:**– (ವಕೀಲರ ಮುಖವನ್ನು ನೋಡಿ ನಗತೊಡಗುವನು.)

**ವಕೀಲ:**– ಯಾತಕ್ಕ ನಗ್ತೀಯೋ ?

**ಸೆಕ್ರೆಟರಿ:**– ನಗದs ಏನ ಮಾಡ್ಲಿರೀ. ಭಾಷಣಾ ಮಾಡೋ ನಮ್ಮ ಮುಖಂಡ್ರೆಲ್ಲಾ ಹ್ಯಾಂಗಿದ್ದಾರಲ್ಲಪಾ ಅಂತ ನಗೀಬರ್ತದ.

**ವಕೀಲ:**— ಯಾತಕ್ಕs ?

**ಸೆಕ್ರೆಟರಿ:**– ಮತ್ತೇನದರೀ, ಮೊನ್ನೆ ಒಬ್ಬ ಮುಖಂಡರು "ಸೆರೆ ಕುಡಿಯೂದು ಒಳ್ಳೇದಲ್ಲಾಂತ'' ಭಾಷಣಾ ಮಾಡಾಕ ಬಂದಿದ್ರು. ಭಾಷಣಾ ಮಾಡೂದಕು ಮೊದಲು ಅವರೇನು ಹೇಳಿದರನ್ನೂದು ಗೊತ್ತದ ಏನ್ನಿಮುಗ ?

**ವಕೀಲ:**— ಏನಂದ್ರು ?

**ಸೆಕ್ರೆಟರಿ:**— ಭಾಷಣಾ ಮುಗಿಯೂದರಾಗ ಬಾಟ್ಲಿ ವ್ಯವಸ್ಥಾ ಮಾಡಿರಬೇಕಪಾ, ಇಲ್ಲದಿದ್ರ ನಮಗ ನಡಿಯೂದs ಇಲ್ಲಾ ಅಂತಂದ್ರು.

**ವಕೀಲ:**– ವ್ಯವಸ್ಥಾ ಮಾಡಿದಿಲ್ಲೊ ?

**ಸೆಕ್ರೆಟರಿ:**– ಮಾಡ್ಲಿಕ್ಕೇ ಬೇಕಲ್ರೀ !

**ವಕೀಲ:**— ಮಾಡಬೇಕಪಾ, ಮಾಡಬೇಕು. ಇಂಥಾ ಉಪಕಾರದ ಕೆಲಸಾ ಸೆಕ್ರೆಟರಿಗಳು ಮಾಡದಿದ್ರ ಮತ್ಯಾರು ಮಾಡಬೇಕು.

**ಸೆಕ್ರೆಟರಿ:**– ಮಾಡಬೇಕು ಬಿಡ್ರಿ. ಆದರ ನಮ್ಮ ಮುಖಂಡರು ಎಂಥೆಂಥವರದಾರಲ್ಲಾ ಅಂತ ನಗೀ ಬರ್ತದ.

**ವಕೀಲ:**— ಯಾಕ ?

**ಸೆಕ್ರೆಟರಿ:**- ಮತ್ತೇನದರೀ ? ಕುಡೀಬ್ಯಾಡ್ರೀ ಅಂತ ಭಾಷಣಾ ಮಾಡವರಿಗೆ ಸೆರೆ ಸಪ್ಲಾಯ ಮಾಡಬೇಕು. ಎಲ್ಲಾರೂ ನೀತಿವಂತರಾಗಿ ಬಾಳಬೇಕೂ ಅಂತ ಭಾಷಣಾ ಮಾಡವಂಗೆ ಹೆಂಗಸರ್ನ ಸಪ್ಲಾಯ್ ಮಾಡಬೇಕು.

**ವಕೀಲ:**– ಮಾಡಬೇಕಪಾ, ಮಾಡಬೇಕು. ಮನುಷ್ಯಾನಲ್ಲೆ ಪರೋಪಕಾರ ಭಾವನಾ ಇರಬೇಕು. ಅಂಪ್ರ ನೀನೂ ಮುಂದೆ ನಮ್ಹಾಂಗ ಆಗ್ತೀದಿ.

**ಸೆಕ್ರೆಟರಿ:**— ಅಂದ್ರs ಮೊದಲ ನೀವೂ ನನ್ಹಾಂಗ ಸಪ್ಲಾಯ್ ಮಾಡೀರೀ ಅಂಥಂಗಾಯ್ತಲ್ಲಾ !

**ವಕೀಲ:**– ಹಿಂದಿಂದು ಹಾಳಾಗಿ ಹೋಗ್ಲಿ ಬಿಡು. ಇವತ್ತು ಸಾಯಂಕಾಲಕ್ಕ ವ್ಯವಸ್ಥಾ ಮಾಡೂದನ್ನ ಮರೀಬ್ಯಾಡಪಾ. ಹೊಸಾ ನಾಲು ಸಿಗದಾ

ಭಾಳ ದಿವಸಾದವು ಮನೀಯವರೂ ಹೆರಿಗೀ ಆಸ್ಪತ್ರಿಯೊಳಗ ಅಡ್ಮಿಟ್ ಆಗ್ಯಾರ. ಹೀಂಗಾಗಿ ನಮಗ ಭಾಳ ತ್ರಾಸಾಗೇದಪಾ ! ರಾತ್ರೀ ನಾ ಹ್ಯಾಂಗ ಕಳೀತೀನಂಬೋದು ದೇವರಿಗೇ ಗೊತ್ತು. ನಮ್ಮಂಥವರಿಗೆ ದೇವರು ಇಂಥಾ ಹೊತ್ತು ತರಬಾರದಪಾ.

**ಸೆಕ್ರೆಟರಿ:**– ಹೌದು ರಾಯರೇ ! ದೇವರಿಗೆ ಕರುಣಾನs ಇಲ್ಲ.

**ವಕೀಲ:**– ಹೌದಪಾ ! ಸಧ್ಯಕ್ಕ ಸಂಪರಿಸ್ಥಿತಿ ಹಂಗs ಆದ. ಆದಕ್ಕ ನಿನ್ಮುಂದ ಹೇಳಬೇಕಾತು. ದೇವರಿಂದಾಗದ ಕೆಲಸ ನಿನ್ನಿಂದ ಸಾಧ್ಯ ಐತೆಪಾ.

**ಸೆಕ್ರೆಟರಿ:**— ಹೌದು ರಾಯರೇ ! ಇಂಥಾ ತಲಿಹಿಡಕ ಕೆಲಸಾ ದೇವರ‍್ಯಾಕ ಮಾಡ್ತಾನ ? ಮಾಡಿದರ ನಮ್ಮಂಥವರs ಮಾಡಬೇಕು.

**ವಕೀಲ:**– ಹೌದಪಾ, ಆದಕ್ಕs ನಿನ್ಮುಂದ ಹೇಳೀರೂದು. ಹ್ಯಾಂಗರಾ ಮಾಡಿ ಇವತ್ತು ಸಪ್ಲಾಯ್ ಮಾಡಲ್ಲಾ.

**ಸೆಕ್ರೆಟರಿ:** -- ಅಲ್ರೀ, ನಮ್ದೇಶದಮ್ಯಾಲ ಚೀನದವರು, ಪಾಕಿಸ್ತಾನದವರ್ ಆಕ್ರಮಣಾ ಮಾಡ್ಲಿಕ್ಹತ್ಯಾರ. ಇಂಥಾ ಗಂಭೀರ ಪರಿಸ್ಥಿತಿಯೊಳಗ ನೀವು ಹೆಂಗರು ಬೇಕೂ ಅಂತೀರಲ್ರೀ ?

**ವಕೀಲ:**– ಮತ್ತೇನನಬೇಕು ?

**ಸೆಕ್ರೆಟರಿ:**– ಅಲ್ರೀ ! ಇಂಥಾ ಪರಿಸ್ಥಿತಿಯೊಳಗ ದೇಶದ ಭದ್ರತೆ ಸಲುವಾಗಿ ಹೆಣಗಾಡೂದು ಬಿಟ್ಟು ಹೆಂಗಸರ ಸಲುವಾಗಿ ಬಾಯಿ–ಬಾಯಿ ಬಿಡತೀರಲ್ರೀ ?

**ವಕೀಲ:**— ಅಲ್ಲೋ, ದೇಶದ ಭದ್ರತಾದ ಸಲುವಾಗಿ ದುಡಿಯುವರು ಅದs ಅದಾರ. ಅಲ್ದs ...

**ಸೆಕ್ರೆಟರಿ:**– ಮತ್ತೇನರಿ, ಅದು.

**ವಕೀಲ:**— ಕೃಷ್ಣ ಪರಮಾತ್ಮಾ ಹೇಳಿದ್ದು ಕೇಳಿಲ್ಲೇನು, ಗೀತಾದಾಗ ?

**ಸೆಕ್ರೆಟರಿ:**– ಏನಂತ ಹೇಳ್ಯಾನರಿs ?

**ವಕೀಲ:** ಧರ್ಮ ಸಂಸ್ಥಾಪನಾರ್ಥಾಯ ಸಂಭವಾಮೀ ಯುಗೇ ಯುಗೇ ಅಂತ ಹೇಳ್ಯಾನ ಅಂದಾಗ ನಾವ್ಯಾಕ ಚಿಂತೀ ಮಾಡಬೇಕು ಚೀನಿಗಳನ್ನ, ಪಾಕಿಸ್ತಾನದವನ್ನ ಆ ಪರಮಾತ್ಮ ಕಣ್ಣು ಮುಚ್ಚಿ ತೆರೆಯೂದರೊಳಗ ಭಸ್ಮ ಮಾಡಿಬಿಡತಾನ.

ಸೆಕ್ರೆಟರಿ:– ಅದಕ್ಕs ನೀವಿಲ್ಲೆ ಹೆಂಗಸರ್ನ ಭಸ್ಮ ಮಾಡಾಕ್ಹತ್ತೀರೇನು ?

ವಕೀಲ:– ನೋಡಪಾ ! ಇಂಥಾ ಹೊತ್ತಿನ್ಯಾಗ ಆ ಸುದ್ದೀತಗೀಬ್ಯಾಡಾ ನಾ ಆಗಳೇ ಹೇಳಿದ್ದು ಮಾಡ್ತಿಯಿಲ್ಲೋ ?

ಸೆಕ್ರೆಟರಿ:– ಯಾವುದರೀ ಅದು ?

ವಕೀಲ:– ಅದs ಹೊಸಾ ಮಾಲಿಂದು.

ಸೆಕ್ರೆಟರಿ:– ನಿಮಗ ಸಪ್ಲಾಯ್ ಮಾಡಬಹುದಿತ್ತರೀ. ಆದರ ಏನ್ ಮಾಡೂದು........?

ವಕೀಲ:– (ಗಾಬರಿಯಿಂದ) ಯಾಕೋ ಏನಾಯ್ತಾ ?

ಸೆಕ್ರೆಟರಿ:– ಇಂಥಾ ಹೊತ್ತಿಗೆ ಉಪಯೋಗ ಆಗ್ತಾರಂತ ಮೂರು ಹುಡಿಗೇರ್ನ ಇಟ್ಟಿದ್ದೆ. ಯಾವಾಗ ಬೇಕವಾಗ ಅವರ ಉಪಯೋಗ ಆಗ್ತಿತ್ತು. ಆದರೇನು ಮಾಡೂದು, ಈಗ ಒಂದು ತಾಸಿನ ಮುಂದೆ ಮೂರೂ ಹುಡಿಗೇರೂ ಎಂಗೇಜ್ ಆಗಿಬಿಟ್ರು.

ವಕೀಲ:– ಎಲ್ಲಿಗೆ ಕಳಿಸಿದಿ ಅವರ್ನ ? ಅಂಥವರ್ಯಾರು ಬಂದಿದ್ರೋ ?

ಸೆಕ್ರೆಟರಿ:– ರಾಯರ ! ಅದನ್ನ ನೀವು ಕೇಳಬಾರದು. ನಾನು ಹೇಳಬಾರದು ಯಾಕಂದ್ರ ಆ ವಿಷಯಾನ ಅಂಥಾದ್ದು. ನಿಮ್ಮಂಥವರs ಬಂದಿದ್ರು ಬಂದವರು ನಿಮಗಿಂತ ದೊಡ್ಡವರs ಅಂತ ಅನ್ಸ್ರೆಲಾ ! ಆರುಮಂದಿ ಬಂದು, ಆರು ಹುಡುಗೇರು ಬೇಕೂ ಅಂದ್ರು. ನಾನೂ ಭಾಳ ಕಷ್ಟ ಪಟ್ಟೆ. ಆಯುತ ಹೊತ್ತಿನ್ಯಾಗ ಸಿಗಾಕ ಅವೇನ ಕಾಯಿಪಲ್ಲೇನ. ಕಡೀಕ ಅವs ಮೂರು ಹುಡಿಗೇರ್ನ ಕಳಿಸಿ ಇವರೊಳಗs ಹ್ಯಾಂಗರಾ ಮಾಡಿ ಸಹಕರಿಸಿಕೊಂಡು ಹೋಗ್ರೀ ಅಂದೆ. ಯಾಕಂದ್ರ ಇದು ಸಹಕಾರದ ಯುಗಾ ನೋಡ್ರಿ. ಇದ್ದದ್ದರೊಳಗs ಸಹಕರಿಸಿಕೊಂಡು ಹೋಗಬೇಕಾಗ ತದ.

ವಕೀಲ:- ಹೌದಪಾ, ಹೌದು; ನಮ್ಮಂಥಾ ತಿಳಿದವರು ಸಹಕರಿಸಿಕೊಂಡು ಹೋಗದಿದ್ದರ ಹ್ಯಾಂಗ ?

ಸೆಕ್ರೆಟರಿ:–ನಾನೂ ಆದನ್ನs ಹೇಳಿ ಹುಡಿಗೇರ್ನ ಕಳಿಸೀನಿ. ಅವರೇನು ಇವತ್ತು ರಾತ್ರೀಗೆ ವಾಪಸ್ ಬರ್ತಾರೋ, ಏನು ನಾಳೆಗೆ ಬರ್ತಾರೋ ಗೊತ್ತಿಲ್ಲಾ.

ವಕೀಲ:– ಅಂತೂ, ಇವತ್ತ ನಮ್ಮನ್ನ ಉಪವಾಸಾ ಕೊಲ್ತೀದೀ ಅಂಥಂಗಾ ತಲ್ಲಾ

ಸೆಕ್ರೆಟರಿ:— ನಾನರೆ ನಿಮ್ಮಡ್ಲಿ ರಾಯರ್ರೆ ?

ವಕೀಲ:– ನನ್ನ ಮುಂದೈಪಕ್ಕ ಯಾರೇನ ಮಾಡೂದದ್ರಪಾ. ಹೋಗಲಿ ಬಿಡು ಸ್ವಾಗತ ಗೀತಾ ಹಾಡೂದಕ್ಕರಾ ಹೆಂಗಸೂರು ಬರ್ತಾರೋ ಅಥವಾ ಯಾವದರಾ ಕನ್ನಡ ಸಾಲೀ ಹುಡುಗೂರ್ನ ಹಿಡಿದೀದ್ಯೋ ?

ಸೆಕ್ರೆಟರಿ:– ಷಾಂಗ್ಯಾಂಗಾಗ್ತದರೀ ರಾಯರ ! ಅದಕ್ಕಂತ ಈಶ್ವರರಾಯರ ಹೆಂಡತಿ ಅರುಂಧತಿ ಹಾಗು ಆಕೆಯ ತಂಗಿ ಸುವರ್ಣಾಗ ಹೇಳಿಟ್ಟೇನಿ ಇನ್ನೇನು ಅವರೂ ಬರೋ ಹೊತ್ತು.

ವಕೀಲ:– ಅರುಂಧತಿ ಬರ್ತಾಳೇನು? ಹಾಂಗಿದ್ರ ಏನೋ ಸ್ವಲ್ಪ ಶುಭ ಲಕ್ಷಣ ಕಾಣಸ್ತದ. ಆಕೀ ಪರಿಚಯ ಅದ್ರ ನನಗ.

ಸೆಕ್ರೆಟರಿ:– ರಾಯರ ! ಅರುಂಧತೀನ್ನ ಅಷ್ಟು ಹಗುರೂ ಅಂತ ತಿಳಕೋ ಬ್ಯಾಡ್ರಿ. ಈಗಿನ ಪರಿಸ್ಥಿತಿಯೊಳಗಂತೂ ಆಕೀಯಿಂದ ದೂರ ಇರೂದ್ರ ಒಳ್ಳೇದು.

ವಕೀಲ:– ನನಗಡೆಲ್ಲಾ ಗೊತ್ತದ. ಆ ಬಗ್ಗೆ ನೀನು ಕಾಳಜೀ ಮಾಡಬ್ಯಾಡ.

ಸೆಕ್ರೆಟರಿ:– ಹಾಂಗಿದ್ರ ನಿಮ್ಮಿಷ್ಟ ರಾಯರ! (ಎದುರಿಗೆ ಅರುಂಧತಿ, ಸುವರ್ಣಾ ಮತ್ತು ಪ್ರಮೀಲೆಯರು ಬರುತ್ತಿರುವುದನ್ನು ಕಂಡು) ರಾಯರೇ,ಅವರೇ ಬಂದ್ರು (ಅರುಂಧತಿಗೆ) ಅರುಂಧತಿದೇವಿಯವರೇ ! ನಿಮಗ ನೂರು ವರುಷ ಆಯುಷ್ಯ.

ಅರುಂಧತಿ:– ನೂರು ತಾಸೂ ಬದುಕಾಕ ಇಷ್ಟ ಇಲ್ಲದವರಿಗೆ ನೂರು ವರ್ಷ ಆಯುಷ್ಯ ತೊಗೊಂಡೇನ್ಮಾಡ್ಬೇಕಾಗೇದ.

ವಕೀಲ:– ನಮಸ್ಕಾರ ಅರುಂಧತಿಯವರಿಗೆ, ಆರಾಮಿದ್ದೀರಾ ?

ಅರುಂಧತಿ:– ನಮಸ್ಕಾರ ವಕೀಲರೇ ! ಏನೋ ಇನ್ನೂ ಬದುಕೀನಿ ಆಯ್ತು.

ವಕೀಲ:– ಅಷ್ಟು ನಿರಾಶಾ ಆಗಬಾರದರೀ. ಅದುಹೋಗ್ಲಿ. ಈಕೆಂತೂ ನಿಮ್ತುಂಗಿ ಅತ್ಲಾಗದಾರಲ್ಲಾ, ಅವರ್ಯಾರು ?

ಅರುಂಧತಿ:– ಆಕಿ ನನ್ನ ಗೆಳತಿ ಪ್ರಮೀಲಾ ಅಂತ ಆಕೀ ಹೆಸರು. ರಮಾ ಕಾಂತ ಅಂತ ಇದ್ದಾರಲ್ಲಾ, ಅವರ್ತುಂಗಿ.

ವಕೀಲ:– ಸಂತೋಷ, ಸಂತೋಷ; ಅರುಂಧತಿಯವರೇ ! ನಿಮ್ಮನ್ನ ಭೆಟ್ಟಿ ಯಾಗಬೇಕೂ ಅಂತ ಭಾಳ ದಿವಸದಿಂದ ಮನಸ್ಸಿನೊಳಗಿತ್ತು. ನಡುವೆ ಅದೇನೇನೋ ಸುದ್ದೀಕೇಳಿ·ಸುಮ್ಮನಾಗಿ ಬಿಟ್ಟೆ.

ಅರುಂಧತಿ:– ಹೋಗಲಿ ಬಿಡ್ರಿ. ಆ ವಿಷಯ ಎತ್ತಬ್ಯಾಡ್ರಿ.

ವಕೀಲ:– ನಿಮಗ ಬ್ಯಾಡಾದದ್ದು ನನಗರೆ ಯಾತಕ್ಕ ಬೇಕು. ಆದರ ಇವತ್ತು ಅನಾಯಾಸ ಭೆಟ್ಟೀ ಆಗೀರಿ. ನನ್ನ ಭಾಷಣ ಮುಗಿಯೂತನಕಾ ಇರ್ರಿ ನಿಮ್ಮ ಕೂಡ ಸ್ವಲ್ಪ ಪ್ರಾಯ್‌ವ್ಹೆಟ್ಟಾಗಿ ಮಾತಾಡಬೇಕಾಗೇದ.

ಅರುಂಧತಿ:– ಆಗಲಿ ವಕೀಲರ, ಭೆಟ್ಯಾಗತೀನಿ, ಅಂಥಂಗ ನೀವಿನ್ನೂ ಇಲ್ಲೇ ಆದೀರಲ್ಲ. ಹೊರಡೂದಿಲ್ಲೇನು ?

ವಕೀಲ:– ಇನ್ನೇನು ಹೊರಡಬೇಕಂತs ಇದ್ವಿ. ಅಷ್ಟರಾಗ ನೀವೂ ಬಂದ್ರಿ. ಎಲ್ಲಾರೂ ಕೂಡೇ ಹೋಗೂಣ ನಡೀರಲ್ಲ ! ಯಾಕ್ರೀ ಸೆಕ್ರೆಟರಿಗಳೆ ?

ಸೆಕ್ರೆಟರಿ:– ಹೌದು ರಾಯರೇ !

(ಎಲ್ಲರೂ ಹೋಗುವರು ಅವರು ಹೋದ ವಿರುದ್ಧ ದಿಕ್ಕಿನಿಂದ ಆವರೆಗೆ ಅಲ್ಲಿಯೇ ಅಡಿಗಿಕೊಂಡು ನಿಂತಿದ್ದ ರಮಾಕಾಂತ ಮತ್ತು ಚಂದ್ರಶೇಖರರು ಪ್ರವೇಶಿಸುವರು.)

ರಮಾಕಾಂತ:- ಚಂದ್ರೂ ! ಕೇಳಿದಿಲ್ಲೋ, ಇಷ್ಟೊತ್ತನಕಾ ಇವರು ಮಾತಾಡಿದ್ದನ್ನ.

ಚಂದ್ರಶೇಖರ:— ಕೇಳಿದ್ನೆಪಾ ! ಇಂಥಾ ಘಟಿಂಗರ ಹೆಣಾ ಹಾಕಬೇಕಾದರ ಒಂದು ಟೇಪ ರಿಕಾರ್ಡಿಂಗ ಮಶೀನು ತೊಗೊಂಡು ಅಡ್ಡ್ಯಾಡ ಬೇಕ್ನೋಡು. ಅಂದ್ರ ಪರ್ಷೋಪತ್ತಿನ್ಯಾಗ ಇವರ ಸದ್ದಡಗಿಸಬಹುದು.

ರಮಾಕಾಂತ:– ಹೌದು, ಹಾಂಗೇನರ ಮಾಡsಬೇಕು. ಎಲ್ಲಾದೂ ಸರಕಾರಾನ ಮಾಡಬೇಕೂ ಅಂತ ನಾವು ಸುಮ್ನ ಕುಂಡರಬಾರದು.

ಚಂದ್ರಶೇಖರ:– ಅಂದರ ? ಕಾಯ್ದೇನ ನಮ್ಮ ಕೈಯಾಗ ತೊಗೋಬೇಕಂತೀಯೇನು.

ರಮಾಕಾಂತ:– ಹಾಂಗಲ್ಲೋ ! ನಮ್ಮ ಕೈಲಾದಮಟ್ಟಿಗೆ ಇಂಥಾ ಬಂಡರಿಂದಾ ಆಗೂವಂಥಾ ಅನಾಹುತ ತಪ್ಪಿಸಬೇಕು.

ಚಂದ್ರಶೇಖರ:– ಪೋಲೀಸರು ಇಂಥಾದರ ಕಡೇ ಯಾಕ ಲಕ್ಷಾ ಹಾಕಬಾರದು ?

ರಮಾಕಾಂತ:– ತಮ್ಮಾ ! ಇವರು ಬರೇ ಪೋಲಿಸರಿಗೇ ಅಲ್ಲ; ಪೋಲೀಸ್ ಅಧಿಕಾರಿಗಳಿಗೂ ಹೆದರೂದಿಲ್ಲಾ. ಯಾಕಂದ್ರ ಇವರಿಗೆ ಮಂತ್ರಿಗಳ ತನಕಾ ವಶೀಲಿ ಇರ್ತೈತಿ ನೋಡು.

ಚಂದ್ರಶೇಖರ:– ಹಾಂಗಿದ್ರ ಪೋಲಿಸರಿಗೆ ಅಪವಾದಾ ಕೊಡೂದು ತಪ್ಪೂ ಅಂಥಂಗಾತಲ್ಲಾ !

ರಮಾಕಾಂತ:– ಹೌದು ಮತ್ತ. ಈಗ ಎಲ್ಲಾರ ಕಣ್ಣಾಗೂ ಪೋಲಿಸರು ಮತ್ತ ರೆವ್ಹಿನ್ಯೂ ಡಿಪಾರ್ಟಮೆಂಟನ್ಯಾಗಿನ ಗುಮಾಸ್ತರು ಕಾಣಸ್ತಾರ. ಆದರ ಹಡಗಾ ಸುಂಗೂವಂಥಾ ಈ ಭಂಡರು ಯಾರ ಕಣ್ಣಿಗೂ ಬೀಳೂದಿಲ್ಲಾ.

ಚಂದ್ರಶೇಖರ:— ಅಲ್ಲಪಾ, ಕೆಲವು ಕಡೆ ಪೋಲೀಸರೂ ಅತ್ಯಾಚಾರಾ ಮಾಡತಾರಲ್ಲಾ, ಅದಕ್ಕೇನಂತೀದಿ ?

ರಮಾಕಾಂತ:– ಅದು ಹೊರಗಿನ್ನಿಂದಾ ನೋಡುವರಿಗೆ ಪೋಲೀಸರದs ತಪ್ಪೂ ಅಂತ ಕಂಡ ಬಂದ್ರೂ ಅದರ ಹಿಂದ ಯಾವನರಾ ಒಬ್ಬ ಮುಖಂಡನ ಕೈ ಇರ್‍ತೈತೀ ಅನ್ನೂದನ್ನ ನಾವು ಮರೀಬಾರ್‍ದು. ಅದಕ್ಕs ನಾವು ಇಂಥ ಪರ ಬೆನ್ನs ಹತ್ತಬೇಕು.

ಚಂದ್ರಶೇಖರ:- ಅಂಕೂ ಇವತ್ತಿನ ಟಾಯಿಂ ಛಲೋ ಇದ್ಧಂಗೈತಿ.

ರಮಾಕಾಂತ:– ಯಾಕ ?

ಚಂದ್ರಶೇಖರ:– ಬೆಳಿಗ್ಗೆ ಡಾಕ್ಟರನ ಪೂಜ್ಯಾತು. ಇನ್ನ ರಾತ್ರೀಗೆ ವಕೀಲರದೂ ಅಷ್ಟು ಮುಗಿಸಿಬಿಡೋಣಲ್ಲಾ !

ರಮಾಕಾಂತ:– ಭಾಷಣ ಮುಗದ ಮ್ಯಾಲ ಸುವರ್ಣಾನ್ನ ಸಹಿತ ನಮ್ಹಿಂತೇಕs ಬಿಟ್ಟು ಒಬ್ಬಾಕೀನ ವಕೀಲರ್‍ಹಿಂಘೋಗು ಅಂತ ಅರುಂಧತೀಗ್ಹೇಳ್ಬೇಕು. ಆಮ್ಯಾಲ ಏತಾಗತೈತಿ ಅನ್ನೂದನ್ನ ನೋಡಿದರಾತು.

ಚಂದ್ರಶೇಖರ:– ಆಗಲಿ, ನಡೀಹಂಗಾರ, ವಕೀಲರ ಭಾಷಣ ಪ್ರಾರಂಭ ಆಗೂದಕ್ಕೂ ಮೊದ್ಲs ಹೋಗುಣು. (ಹೋಗುವರು.)

## ದೃಶ್ಯ ೫ ಜಂಗಲ ರಸ್ತಾ

ವಕೀಲರು ಅರುಂಧತಿ ಮತ್ತು ಸೆಕ್ರೆಟರಿಯೊಂದಿಗೆ ಪ್ರವೇಶಿಸುವರು. ಡಾಕ್ಟರರು ಮೂವರನ್ನೂ ಕೆಂಗಣ್ಣಿನಿಂದ ನೋಡುತ್ತ ಸುಮ್ಮನೆ ಹೋಗಿ ಬಿಡುವರು. ಅರುಂಧತಿಯು ಏನನ್ನೋ ಜ್ಞಾಪಿಸಿಕೊಂಡು—

ಅರುಂಧತಿ:– ಸುವರ್ಣಾಗ ಮನಿಗ್ಹೋಗಿ ಬಿಡೂಂತ ಹೇಳಿ ಬರ್‍ತೀನ್ರಿ ವಕೀಲರೇ !

ವಕೀಲ:– ಆಗಲಿ. ಬೇಗ ಬರ್ರಿ. (ಅರುಂಧತಿಯು ಹೋಗುವಳು ಅವಳು ಸ್ವಲ್ಪ ದೂರ ಹೋದನಂತರ) ಈಕೀ ಸಲುವಾಗಿ ಎಷ್ಟು ಹೆದರಿಕೇ ಹಾಕ್ಲಲ್ಲೋ ? ಈಗ ನೀನs ನೋಡಿದೆಲ್ಲಾ. ತಂಗೀನೂ ಬಿಟ್ಟು ಒಬ್ಬಾಕೇ ಬರಾಕ ತಯಾರಾಗ್ಯಾಳ. ನನಪ ಗೊತ್ತದs ನೋs ಯಾವಾಕ ಹ್ಯಾಂಗs ಅನ್ನೂದು.

ಸೆಕ್ರೆಟರಿ:— ಏನೋರೆಪಾ ! ನಂದಂತೂ ಎಡಗಣ್ಣು ಒಂದs ಸವನ ಹಾರ್ಲಿಕ್ಹತ್ತೇದ. ನಿಮ್ಮನ್ನ ದೇವರs ಕಾಪಾಡಬೇಕು, ಆಯ್ತು.

ವಕೀಲ:– ನೋಡು, ಖರೇಅಂದ್ರ ನೀನು ಸೆಕ್ರೆಟರಿ ಆಗ್ಲಿಕ್ಕೆ ನಾಲಾಯಖ್ ಇದ್ದೀದಿ ಮುಖಾ ನೋಡಿದತಕ್ಷಣಾ ಹೇಳಬೇಕು, ಮಾಲು ಹ್ಯಾಂಗೈತಿ. ಅನ್ನೂದನ್ನ; ನೀನು ರಬ್ಬರಿನ ಹಾಂವಿಗೆ ಅಂಜಾಂವ ಕಾಣಸ್ತೀದಿ.

ಸೆಕ್ರೆಟರಿ:– ಅದೇನ ಇರ್ಲಿ ರಾಯರ ! ನಾ ಮಾತ್ರ ಇಲ್ಲಿರಲಾರೆ. ನೀವು ಏನ ಬೇಕಾದ್ದು ಮಾಡಿಕೊಳ್ರಿ. ನಾ ಹೊಂಟೆ.

ವಕೀಲ:– ನೀ ಹೋಗದಿದ್ರೂ ನಾ ಕಳಸ್ತಿದ್ದೆ.

ಸೆಕ್ರೆಟರಿ:– ನೀವು ಕಳಸೂದಲ್ಲ ರಾಯರ ! ನೀವು ಇರೂ ಅಂದ್ರೂ ನಾನಿರೂದಿಲ್ಲ. ಒಳ್ಳೇದು, ನಾನಿನ್ನ ಬರ್ತೀನಿ. ನಿಮ್ಮನ್ನ ದೇವರs ಕಾಪಾಡಲೀ (ಹೋಗುವನು)

ವಕೀಲ:– ಇಂಥಾ ಟೈಮಿನ್ಯಾಗ ದೇವರಿಗೆ ಬ್ಯಾರೇ ಕೆಲಸ ಇರೂದಿಲ್ಲಂತ್ರ ತಿಳದಾನ ಈ ಮುರ್ಖ. (ಅದೇ ಸಮಯಕ್ಕೆ ಅರುಂಧತಿ ಬರುವಳು) ಅಂಥಾಗ ನಿಮ್ತಂಗೀನ್ಯಾಕ ಕಳಿಸಿದಿರಿ ?

ಅರುಂಧತಿ:– ನೀವು ಅದೇನೋ ಪ್ರೈವೇಟ್ ಮಾತಾಡೋದದ ಅಂತ ಹೇಳಿದಿರಿ. ಅದಕ್ಕ ಸುವರ್ಣಾಗ ಮನೀಗ್ಹೋಗ ಬಿಡೂಂತ ಹೇಳಿ ಕಳಿಸಿದೆ. ನಿಮ್ದೇನದು ಕೆಲಸಾ, ಲಗೂನs ಹೇಳಬಿಡ್ರಿ. ಅಂದ್ರ ಭಾಳ ರಾತ್ರಿ ಆಗೂದರಾಗ ಮನೀಸೇರ್ಲಿಕ್ಕೆ ಅನೂಕೂಲಾಗತದ.

ವಕೀಲ:- ಅಷ್ಟ್ಯಾಕ ಅವಸರಾ ಮಾಡ್ತೀರಿ ? ರಾತ್ರಿ ಭಾಳಾದರ ನಿಮ್ಮನೀ ತನಕಾ ಬಂದು ಕಳಿಸಿ ಹೋಗ್ತೀನಿ. ನಾನೇನು ನಿಮ್ಮನೀ ನೋಡಿಲ್ಲಾ ಅನ್ನೊ ಹಾಂಗಿಲ್ಲಾ.

**ಅರುಂಧತಿ:**— ಅದು ಖರೇ ಅವ ಬಿಡ್ರಿ. ಆದರ ನಿಮ್ದು ಸನ್ಪತ್ರ ಕೆಲಸರಾ ಏನಿತ್ತು ?

**ವಕೀಲ:**— ನಿಮ್ಮನ್ನ ನೋಡದಾ ಎಂಟ್ಹತ್ತು ತಿಂಗಳಾದವು. ಅದಕಽ ಭೆಟ್ಟ್ಯಾಗಬೇಕೂಂತ ಮನಸ್ಸಿನ್ಯಾಗಿತ್ತು.

**ಅರುಂಧತಿ:**— ಭೆಟ್ಟ್ಯಾಗ ಬೇಕಾಗಿತ್ತು ?

**ವಕೀಲ:**— ಆಗಬಹುದಾಗಿತ್ತು. ಆದರ ನಡುವೆ ನಿಮ್ದೇನೇನೋ ಸುದ್ದೀ ಕೇಳಿದೆ. ಅದರ ಸಲುವಾಗಿ ಬಿಟ್ಟಿದ್ದು. ಮೊನ್ನೆ ಮತ್ತೊಂದು ವಿಷಯ ತಿಳೀತು. ಅದಕಽ ಭೆಟ್ಟ್ಯಾಗಬೇಕನಿಸ್ತು.

**ಅರುಂಧತಿ:**— ವಕೀಲರಽ ನಾನೊಂದು ಮಾತು ಹೇಳಲ್ಯಾ ?

**ವಕೀಲ:**— ಹೇಳ್ರಿಲಾ, ಅವಶ್ಯ ಹೇಳ್ರಿ !

**ಅರುಂಧತಿ:**– ನನ್ನ ಬಗ್ಗೆ ಅದೇನೇನೋ ಸುದ್ದೀ ಕೇಳಿದೆ ಅಂತ ಅಂದ್ರಿಲ್ಲಾ?

**ವಕೀಲ:**— ಹೌದು.

**ಅರುಂಧತಿ:**– ದಯವಿಟ್ಟು ಆ ವಿಷಯ ಮಾತ್ರ ಎತ್ತಬ್ಯಾಡ್ರಿ. ಅದನ್ನೊಂದು ಬಿಟ್ಟು ಬೇಕಾದ್ದು ಕೇಳ್ರಿ ಉತ್ತರಾ ಕೊಡ್ಲಿಕ್ಕೆ ನಾ ತಯಾರ ಅದೀನಿ.

**ವಕೀಲ:**— ಹಂಗಽ ಆಗ್ಲಿಲ್ಲಾ.

**ಅರುಂಧತಿ:**– ಹಾಂಗಿದ್ರ, ಈಗ ಹೇಳ್ರಿ ನನ್ಹಂತೇಕ ಪ್ರೈವೇಟ ಕೆಲಸೇನಿತ್ತು ?

**ವಕೀಲ:**– ಸ್ಪಷ್ಟವಾಗಿ ಹೇಳಿಬಿಡಲ್ಯಾ ?

**ಅರುಂಧತಿ:**— ಹೇಳ್ರಿಲ್ಲಾ, ಆಗಳೇ ನಾನೂ ಸ್ಪಷ್ಟಾಗೇ ಹೇಳಿಬಿಡಲಿಲ್ಲೇನು?

**ವಕೀಲ:**– ಅದು ಖರೆ;ಆದರ ನೀವು ಮನಸ್ಸಿಗೆ ಏನು ತಿಳಕೊಂತೀರೋ ಅಂತ!

**ಅರುಂಧತಿ:**– ಅಂದ್ರ ? ನೀವು ಕೇಳೋ ಪ್ರಶ್ನೆ, ನಾನು ಮನಸ್ಸಿಗೆ ಏನರಾ ತಿಳಕೊಳ್ಳೋ ಹಾಂಗದ ಏನು ?

**ವಕೀಲ:**– ಹಾಂಗೇನಿಲ್ಲ. ಆದರೂ........

**ಅರುಂಧತಿ:**– ಕೇಳೋ ಧೈರ್ಯ ನಿಮ್ಮಲ್ಲಿರದಿದ್ರ ಅದನ್ನ ಬಿಟ್ಟು ಬ್ಯಾರೇದು ಕೇಳ್ರಿ.

**ವಕೀಲ:**– ಬ್ಯಾರೇದ್ದೇನ ಬ್ಯಾಡಾ, ಅದನ್ನಽ ಕೇಳ್ತೀನಿ.

**ಅರುಂಧತಿ:**– ಕೇಳ್ರಿ ಹಾಂಗಿದ್ರ.

ವಕೀಲ:– ಏನೂ ಇಲ್ಲಾ ಆ........

ಅರುಂಧತಿ:– ಏನೂ ಇರದಿದ್ರ ಬಿಟ್ಟುಬಿಡ್ರಿ.

ವಕೀಲ:– ಅಲ್ಲಾ! ಅದಕ್ಕಲ್ಲ ನಾ ಹೇಳಿದ್ದು.

ಅರುಂಧತಿ:– ಮತ್ಯಾವದಕ್ಕ ?

ವಕೀಲ:– ಅಂದ್ರ! ಆ....ಇದು....(ಎಂದು ಅತ್ತಿತ್ತ ನೋಡಿ ಯಾರೂ ಇಲ್ಲವೆಂಬುದನ್ನು ಖಚಿತಪಡಿಸಿಕೊಂಡು ಸ್ವಲ್ಪ ಮುಂದೆ ಹೋಗಿ ಅರುಂಧತಿಯ ಕೈಹಿಡಿದು) ನನ್ನ ಜೊತೀಲಿರೂದು ನಿಮಗ ಸರಿ ಅನಸ್ತದನೋ ಇಲ್ಲೋ ?

ಅರುಂಧತಿ:– (ಮುಖದ ಮೇಲೆ ಯಾವ ಬದಲಾವಣೆಯನ್ನು ಮಾಡದೆ) ನೀವು ಹೇಳಿದ್ದು ನನಗ ತಿಳೀಲಿಲ್ಲಾ ?

ವಕೀಲ:– ತಿಳೀಲಾರಧಾಂಗ ಹೇಳೀನೇನ್ನಾನು ?

ಅರುಂಧತಿ:– ಆದರೂ ಬಿಡಿಸಿ ಹೇಳ್ರಿಲಾ !

ವಕೀಲ:– ಈಗ ನೋಡ್ರಿ! ನಿಮ್ಮೆಜಮಾನ್ರು ಹ್ಯಾಂಗಿದ್ದಾರನ್ನೂದು ಎಲ್ಲಾರಿಗೂ ಗೊತ್ತದ. ಇನ್ನ ಈಗ ನೀವs ಹೇಳಿದ್ರೆಲ್ಲಾ ಆ ಸುದ್ದೀ ಎತ್ತಬ್ಯಾಡ್ರೀ ಅಂತ; ಅವರೂ ದೂರಾಗಿ ಬಿಟ್ಟಾರ. ಅಂದಾಗ ಈಗ ನೀವು ಖಾಲೀನs ಅದೀರಿ. ಅದಕ್ಕ ನೀವು ಸ್ವಲ್ಪ ದೊಡ್ಡ ಮನಸ್ಸ ಮಾಡಿದರ, ನಾನು....

ಅರುಂಧತಿ:– (ಸಿಟ್ಟಿನಿಂದ ಕೈಕೊಸರಕೊಂಡು) ವಕೀಲರ, ನಿಮ್ತಲೀ ಸರೀ ಅದsನೋ. ಇಲ್ಲೋ ?

ವಕೀಲ:– ತಲೀ ಸರೀ ಇರಲಾರದಂಥವರು ಆಡೂವಂಥಾ ಮಾತಾಡೀನೇನ್ನಾನು ?

ಅರುಂಧತಿ:– ಅಂದ್ರ ? ನೀವಾಡಿದ್ದು ಬುದ್ಧಿವಂತರ ಮಾತೇನು ?

ವಕೀಲ:– (ತಡವರಿಸುತ್ತ) ಅಲ್ಲ, ಹಾಂಗಲ್ಲ; ನಾನೇನ್ನಿಮಗ ಫುಕಟ ಬರ್ರೀ ಅನ್ನೂದಿಲ್ಲಾ. ತಿಂಗಳಿಗೆ ನೂರು ರೂಪಾಯಿ ಕೊಡ್ತೀನಿ. ವಾರದಾಗ ಒಂದೆರಡು ಸಲ ಬಂದೋಗ್ತೀನಿ

ಅರುಂಧತಿ:– ವಕೀಲರ! ನಿಮ್ಮ ಲಾ ಪಾಯಿಂಟು ಕೋರ್ಟಿನ್ಯಾಗ ತೋರಸ್ರೀ!

ವಕೀಲ:– ಅದೇನದು ಲಾ ಪಾಯಿಂಟು ?

ಅರುಂಧತಿ:– ಅದs. ಪುಕಟ ಬರಬ್ಯಾಡ್ರೀ, ತಿಂಗಳಿಗೆ ನೂರು ರೂಪಾಯಿ ಕೊಡ್ತೀನೀ ಅನ್ನೂದು.

ವಕೀಲ:-- ತಪ್ಪೇನದ ಅದರೊಳಗ?

ಅರುಂಧತಿ:– ಮುಚ್ರೀ ಬಾಯಿ! ಹೆಣ್ಣಿನ ಬೆಲೀ ಕಟ್ತೀರ್ರ್ಯಾ? ನೀವು? ನಿಮ್ಮಂಥ ಲಫಂಗರಿಗೇನು ಗೊತ್ರೀ, ಹೆಣ್ಣಿನ ಕಿಮ್ಮತ್ತು?

ವಕೀಲ:– ನಾಲಗೀ ಹಿಡಿತದೊಳಗಿಟಕೊಂಡು ಮಾತಾಡಿದರ ಛಲೋ ಆಗ್ತದ.

ಅರುಂಧತಿ:– ನಿಮ್ಮಂಥವರ ಕೂಡ ಮಾತಾಡಾಕ ನಾಲಗೀ ಬಿಗೀ ಹಿಡಿಬೇಕಾಗಿಲ್ರಿ ವಕೀಲರ!

ವಕೀಲ:– ಅಂದ್ರ?

ಅರುಂಧತಿ:– ಇಷ್ಟು ದಿವಸ ನಾ ನಿಮ್ಮನ್ನ ದೊಡ್ಡ ಮನುಷ್ಯರು ಅಂತ ತಿಳ್ದಿದ್ದೆ. ನೀವು ಏನೇನೋ ಬರದಿದ್ದನ್ನ ನೋಡಿ ದೊಡ್ಡ ಸಾಹಿತಿಗಳೂ ಅಂತ ತಿಳಕೊಂಡಿದ್ದೆ. ಆದರ ನೀವು ತೀರಾ ಥರ್ಡ್‌ಕ್ಲಾಸ್ ಮನುಷ್ಯರು.

ವಕೀಲ:– ನಿಮ್ಮ ನಾಲಗಿ ಹಿಡಿತ ತಪ್ಪಿ ಹೋಗ್ಲಿಕ್ಹತ್ತೇದ. ನೀವು ಹೀಂಗ ಮಾತಾಡಬೇಕಾಪರ ನಾ ಮಾಡೀರೋ ತಪ್ಪರಾ ಯಾವುದು?

ಅರುಂಧತಿ:– ಅದೂ ನಿಮಗ ಗೊತ್ತಿಲ್ಲೇನು? ಅಲ್ರೀ, ನೀವು ಹೆಣ್ಣಿನ ಬೆಲೀ ಕಟ್ಟಾಕ ಹೊರಟೀರೆಲ್ಲಾ, ನಿಮ್ಮ ಕಿಮ್ಮತ್ತರಾ ಏನ್ರಿ?

ವಕೀಲ:– ಹೆಣ್ಣಿನ ಬೆಲೀ ಕಟ್ಟೂದು ತಪ್ಪೂಂತ ನಿಮ್ಮಭಿಪ್ರಾಯೇನು?

ಅರುಂಧತಿ:– ಅಲ್ರೀ! ನಿಮಗ ಜನ್ಮಕೊಟ್ಟದ್ದು ಹೆಣ್ಣು ಅನ್ನೂದರಾ ನಿಮಗ ನೆನಪದ ಏನು?

ವಕೀಲ:- ಅಷ್ಟೂ ಇರೂದಿಲ್ಲೇನು?

ಅರುಂಧತಿ:– ಹಾಂಗಿದ್ರ, ನಿಮ್ಮಾಯಿ ಕಿಮ್ಮತ್ತೆಷ್ಟು?

ವಕೀಲ:– (ಸಿಟ್ಟಿನಿಂದ) ಅರುಂಧತಿ! ನೀನು ನಿನ್ನ ಯೋಗ್ಯತಾ ಮೀರಿ ಮಾತಾಡ್ಲಿಕ್ಹತ್ತೀದಿ. ತಿಳೀತಿಲ್ಲೋ!

ಅರುಂಧತಿ:– ನಿಮಗ ಎಷ್ಟಲಗೂ ಸಿಟ್ಟು ಬಂತ್ರೀ ವಕೀಲರs.

ವಕೀಲ:– ಬರದೇನು ಮಾಡ್ತದ? ನೀ ಎಷ್ಟು? ನಿನ್ನ ಯೋಗ್ಯತಾ ಎಷ್ಟು? ನನ್ನಾಯೀ ತನಕಾ ಹೋಗೂದಂದ್ರ?

ಅರುಂಧತಿ:- ಏಕವಚನದೊಳಗ ಮಾತಾಡಬ್ಯಾಡ್ರೀ ವಕೀಲರs !
ವಕೀಲ:- ನಿನ್ನಂಥಾಕೀಗೆ ಬಹುವಚನ ಬ್ಯಾರೆ ಬೇಕೇನು ?
ಅರುಂಧತಿ:- ವಕೀಲರs, ಎಂದೋ ಸತ್ತು ಹೋಗಿರೋ ನಿಮ್ಮಾಯೀ ಹೆಸರೆತ್ತಿದರ ಇಷ್ಟು ಸಿಟ್ಟು ಬಂತಲ್ಲs ನಿಮಗ ?
ವಕೀಲ:— ಬಾರದೇನ್ಮಾಡ್ತದ ?
ಅರುಂಧತಿ:- ಹಾಂಗಿದ್ರ, ನನ್ನೆದುರಿಗೇ ನಿಂತುಕೊಂಡು ನನಗs ನೂರು ರೂಪಾಯಿ ಕೊಡ್ತೀನೀ ಅಂದ್ರೆಲ್ಲಾ ನನಗೆಷ್ಟು ಸಿಟ್ಟು ಬಂದಿರಬೇಕು ?
ವಕೀಲ:- ನಂತಾಯಿ ಯಾರು ? ನೀ ಯಾರು ? ಆಕೀ ಯೋಗ್ಯತಾ ನಿನಗ ಬಗ್ಲಿಕ್ಕೆ ಸಾಧ್ಯದs ಏನು ?
ಅರುಂಧತಿ:- ಹೆಣ್ಣೂ ಅಂದ್ರ ಎಲ್ಲಾ ಒಂದsರೀ ವಕೀಲರ ! ನಿಮಗ ಇಷ್ಟೂ ತಿಳಿಯೂದಿಲ್ಲಾ ಅಂದ್ರ ನಾ ಏನ್ಹೇಳ್ಲಿ ?
ವಕೀಲ:— ಹಾಂಗಿದ್ರ, ಇನ್ನಮ್ಯಾಲ ಸೀತಾ-ದ್ರೌಪದಿಯರೂ ನನ್ನ ಸಮಾನ ಅಂತ ಹೇಳಿಕೊಂತ ತಿರುಗ್ಯಾಡು.
ಅರುಂಧತಿ:— ಅವರು ನನ್ನ ಸಮಾನಂತ ನಾ ಯಾಕ ಹೇಳ್ಲಿ ? ನಾನು ಅವರಿಗಿಂತ ಹೆಚ್ಚು ಅದೀನs ಹೊರ್ತು ಕಡಿಮಿಲ್ಲಾ. ಇದನ್ನ ನೀವು ಮರೀಬ್ಯಾಡ್ರಿ.
ವಕೀಲ:— ಬಾಯೊಳಗೊಂದು ಛಂಡ ನಾಲಗಿ ಅದs ಅಂತ ತಿಳಿದು ಏನು ಮಾತಾಡಿದರೂ ನಡೀತದs ಅಂತೀಯೇನ್ನೀನು ?
ಅರುಂಧತಿ;- ಬಾಯೊಳಗ ನಾಲಿಗೆದs ಅಂತ ನಿಮ್ಹಾಂಗ ಸಿಕ್ಕದ್ದು ಮಾತಾಡೂದಿಲ್ರೀ, ಖರೇ ಇದ್ದದ್ದನ್ನs ಹೇಳ್ತೀನಿ.
ವಕೀಲ:- ಅಂದ್ರ, ನೀನು ಸೀತಾ-ದ್ರೌಪದಿಯರಿಗಿಂತ ಹೆಚ್ಚಿನ್ಯಾಕೇನು ?
ಅರುಂಧತಿ:- ಹೌದೂ ಅಂದೆ.
ವಕೀಲ:— (ನಗುತ್ತ) ಅದು ಹ್ಯಾಂಗ ?
ಅರುಂಧತಿ:- ಕೇಳ್ರಿ, ಹಾಂಗಿದ್ರ; ಹಿಂದ್ಕ ಸೀತಾ-ದ್ರೌಪದೀ ಅನ್ನವರು ಇದ್ರೋ ಇಲ್ಲೋ ನಮಗ ಗೊತ್ತಿಲ್ಲ. ಆದರೂ ಹಿಂದಿನವರು ಬರದಾರಾ ಅಂದಮ್ಯಾಲ ಇದ್ರೂ ಅಂತ ತಿಳಕೋಬೇಕಾಗತೈತಿ. ಹೌದಲ್ಲೋ ?
ವಕೀಲ:- ಹೌದು.

ಅರುಂಧತಿ:– ನಾನೂ. ಅವರಿದ್ರು ಅಂತ ತಿಳ್ಕೊಂಡೀನಿ. ಸೀತಾ ಇದ್ದದ್ದು ತ್ರೇತಾಯುಗದಾಗ ಹೌದಲ್ಲೋ ?

ವಕೀಲ:— ಹೌದು.

ಅರುಂಧತಿ;– ವಕೀಲರs ಆ ತ್ರೇತಾಯುಗದಾಗ ಸೀತಾನ್ನ ಓಡಿಸಿಗೊಂಡು ಹೋಗಾಕ, ಇಂಡಿಯಾದಾಗ ರಾವಣನಂಥಾವಾ ಒಬ್ನs ಇದ್ದಾ, ಹೌದಲ್ಲೊ ?

ವಕೀಲ:– ಹೌದು.

ಅರುಂಧತಿ:– ಆಮ್ಯಾಲ ದ್ವಾಪರ ಯುಗದಾಗ ದ್ರೌಪದೀ ಮೈಮ್ಯಾಲಿನ ಸೀರಿ ಬಿಚ್ಚಾಕಿಂವಾ ಇಡೀ ಭರತ ಖಂಡದಾಗ ದುಃಶಾಸನ ಒಬ್ನs ಇದ್ದಾ. ಅಲ್ಲs !

ವಕೀಲ:– ಹೌದು.

ಅರುಂಧತಿ:– ಆದರ ಇವತ್ತಿನ ಪರಿಸ್ಥಿತಿ ಹ್ಯಾಂಗದ ಅನ್ನೋದು ನಿಮಗೇನರಾ ಗೊತ್ತದs ಏನು ?

ವಕೀಲ:– ನೀ ಹೇಳೂದs ನನಗ ತಿಳೀವಲ್ದು.

ಅರುಂಧತಿ:– ಅಂದ್ರ, ಈಗ ಊರೂರಿಗೆ, ಓಣಿ-ಓಣಿಗೆ ನೂರಾರು ಜನ ರಾವಣ–ದುಃಶಾಸನನಂಥವರು ಆದಾರಂದ್ರ ನೀವು ಒಪ್ತೀರೇನು ?

ವಕೀಲ:— ನಾನು ಒಪ್ಪೋದು ಬಿಡೂದು ಆ ಮ್ಯಾಲಿನ ಮಾತು. ನೀನಗೇನು ಹೇಳಬೇಕಾಗೇದ ಅದನ್ನೇಳು.

ಅರುಂಧತಿ:– ವಕೀಲರs ! ಹಿಂದ್ಕ ಇಡೀ ಹಿಂದುಸ್ತಾನದಾಗ ಒಬ್ಬೊಬ್ಬ ರಾವಣಾ–ದುಃಶಾಸನಾ ಇದ್ರು. ಸೀತಾ–ದ್ರೌಪದಿಯಂಥವರು ಅಷ್ಟು ಕಷ್ಟಬಟ್ರು. ಅವರು ಆಗ ಹುಟ್ಟೋದರ ಬದಲು ಈಗ ಕಲಿಯುಗದಾಗ ಹುಟ್ಟಿದ್ರ ಅವರ ಬಣ್ಣ ಗೊತ್ತಾಗತಿತ್ತು.

ವಕೀಲ:– ಅಂದ್ರ ?

ಅರುಂಧತಿ:– ಅಂದ್ರೇನ್ರೀ ವಕೀಲರ ? ಇವತ್ತೊಂದು ಹರೇದ ಹುಡಿಗಿ ಕಾಯಿಪಲ್ಲೇ ತರಾಕಂತ ಮನ್ಯಾಗಿಂದಾ ಪ್ಯಾಟಿಗ್ಹೋಗಿ ಬರೂದರಾಗ ಒಂದೆಂಟ್ಹತ್ತು ಮಂದಿ ಆಕೀಗೆ ಟಕ್ಕರ ಹೊಡದಿರತಾರ. ಮತ್ತಿಷ್ಟುಮಂದಿ ಸೆರಗ್ಹಿಡದು ಜಗ್ಗಿರ್ತಾರ. ಹೀಂಗಿದ್ರೂ ಇವತ್ತಿನ ತರುಣಿಯರು ತಮ್ಮ

ಪಾತಿವೃತ್ಯ ಉಳಿಸಿಗೊಂಡಾರ. ಇಂಥಾ ಉಲಕೋಚಿತನಾನ ಏನೂ ತಿಳೀದ ಮೂರ್ಖರು ಮಾಡತಾರಂತ ತಿಳೀಬ್ಯಾಡ್ರಿ. ಕಲ್ತವರು, ಕಲೀತಿರೋ ಸ್ಟೂಡಂಟ್ಸು ಸಹಿತ ಇಂಥಾ ಕೆಲಸಾ ಮಾಡ್ತಾರ. ಕಾಲೇಜ್ ಸ್ಟುಡಂಟ್ಸು ಹುಡುಗೇರಿಗೆ ಏನೇನ ಮಾಡ್ತಾರನ್ನೂದನ್ನ ನೀವೂ ನೋಡಿರಬೇಕಲ್ಲ. ಸಿಟೀ ಬಸ್ಸಿನೊಳಗೂ ಇವರು ಹಾವಳಿ ನಡಿಸಿರತಾರ ಅಂದ್ಮ್ಯಾಲ ಈಗ ನೀವs ಹೇಳ್ರಿ, ಈಗಿನ ತರುಣಿಯರು ಹೆಚ್ಚಿನವರೋ, ಅಥವಾ ಸೀತಾ-ದ್ರೌಪದಿಯರು ಹೆಚ್ಚಿನವರೋ? ಇನ್ನೂ ಒಂದು ಉದಾಹರಣಿ ಕೊಡ್ಲೇನು ಬೇಕಾದರ?

ವಕೀಲ:– ಹ್ಞೂ! ಕೊಟ್ಟುಬಿಡು.

ಅರುಂಧತಿ:– ಈಗ ನಿಮ್ದs ನೋಡ್ರೆಲ್ಲಾ?

ವಕೀಲ:– ಅಂದ್ರ?

ಅರುಂಧತಿ:– ಅಂದ್ರಿಷ್ಟ; ನಿಮಗ ನನ್ನ ವಯಸ್ಸಿನ ಮಗಳಿದ್ರೂ ಇದ್ದಾಳು. ಹೀಂಗಿದ್ರೂ ನನಗ ತಿಂಗಳಿಗೆ ನೂರು ರೂಪಾಯಿ ಕೊಡಾಕ ತಯಾರಾಗೀರಿ. ನಿಮ್ಮಂಥಾ ಲಫಂಗರು ಹೆಜ್ಜೆಜ್ಜಿಗೂ ಇರುವಾಗ ನಮ್ಮಂಥವರು ಎಲ್ಲೀತನಾ ಪಾತಿವೃತ್ಯ ಕಾಪಾಡಿಕೋಬೇಕು.

ವಕೀಲ:– ನೀ ಹೇಳೂ ಮಾತು ಖರೇ ಇದ್ರೂ ನಿನ್ಬಾಯಾಗ ಛಲೋ ಕಾಣೂದಿಲ್ಲಾ.

ಅರುಂಧತಿ:– ಯಾಕ?

ವಕೀಲ:– ಮತ್ತ, ಯಾಕಂತ ಕೇಳ್ತಿಯೇನು? ನೀ ಯಾಪ ದೊಡ್ಡ ಗರತೀ ಅಂತ ಇಂಥಾ ಮಾತಾಡ್ತೀ? ನಿನ್ನ ಮತ್ತ ಆ ಕಾದಂಬರಿಕಾರನ ಪ್ರಕರಣಾ ಯಾರಿಗೂ ಗೊತ್ತಿಲ್ಲಂತ ತಿಳ್ದೀಏನು?

ಅರುಂಧತಿ:– ವಕೀಲರs! ಅವರ ಹೆಸರು ಎತ್ತಬ್ಯಾಡ್ರಿ. ನೀವು ಅವರ ಪಾದಧೂಳಿಗೂ ಸಮಾ ಆಗಲಾರಿರಿ.

ವಕೀಲ:– ಅಂದರ?

ಅರುಂಧತಿ:– ಅವರ ಗುಣಾ ನಿಮಗ್ಯಾರಿಗೂ ಬರೂದು ಸಾಧ್ಯಿಲ್ಲಾ.

ವಕೀಲ:– ಯಾಕ?

ಅರುಂಧತಿ:– ವಕೀಲರs! ನನ್ನ ವಶಾಮಾಡಿಕೋಬೇಕೂ ಅಂತ ಡಾಕ್ಟರು, ವಕೀಲರು, ಪತ್ರಿಕೆ ಆಫೀಸಿನೊಳಗಿನ ಮ್ಯಾನೇಜರು ಭಾಳ ಪ್ರಯತ್ನಾ

ಮಾಡಿದರು. ಅಂದ್ರ ನನ್ನs ಅವರು ಸೂಳೀ ಹಾಂಗ ಇಟಗೊಳ್ಳಾಕ ತಯಾರಾಗಿದ್ರು. ಅದಕ್ಕs ನಾನು ಅಂಥವರಿಗೆಲ್ಲಾ ಸರಿಯಾಗಿ ಬುದ್ಧಿ ಕಲಿಸಿದೆ. ಅವರೊಳಗ ಒಬ್ಬನರಾ ನನ್ನ ಮದಿವಿ ಮಾಡಿಕೊಂತಿನೀ ಅಂತ ಮುಂದ ಬರಲಿಲ್ಲಾ. ಈಗ ನೀವs ನೋಡಿರಿ, ನೀವು ಮುದುಕ ರಾಗೀರಿ, ಆದರೂ ನಾನು ಬೇಕೂ ಅಂತೀರಿ. ಆದರ ನನಕೂಡ ಮದಿವಿ ಮಾಡಿಕೊಳ್ಳಾಕ ತಯಾರಿಲ್ಲ. ಹೌವಲ್ಲೋ ?

ವಕೀಲ:– ಹೌದು ನಿನ್ನ ಜೊತೀಲೆ ಹ್ಯಾಂಗದು ಮದುವ್ಯಾಗೂದು.

ಅರುಂಧತಿ:– ನಿಮ್ಮ ಕೂಡ ಸೂಳ್ಯಾಗಿರಬಹುದು. ಹೆಂಡತ್ಯಾಗಿ ಇರಬಾರದು, ಅಲ್ಲ ?

ವಕೀಲ:– ಹೌದು.

ಅರುಂಧತಿ:– ಹೀಂಗ ಮಾತಾಡಾಕ ನಿಮಗ ನಾಚಿಗಿ ಬರೂದಿಲ್ಲೇನು ?

ವಕೀಲ:— ನಾಚಿಗಿ ಯಾಕ ಬರಬೇಕು ? ಅದು ಹೋಗಲಿಬಿಡು, ಆ ನಿನ್ನ ಕಾದಂಬರಿಕಾರ ಮದ್ವಿ ಮಾಡಿಕೊಳ್ಳಾಕ ತಯಾರಿದ್ನೇನು ?

ಅರುಂಧತಿ:- ಹೌದು.

ವಕೀಲ:– ಹಾಂಗಿದ್ರ ಅವನ್ನ ಬಿಟ್ಯಾಕ ಓಡಿಬಂದಿ ?

ಅರುಂಧತಿ:— ಅವರ್ನ ಬಿಟ್ಟುಬಂದಿಲ್ಲಾನು, ಅವರು ಬ್ಯಾರೇ ಜಾತೀಯವರು ಅವರ ಕೂಡ ಮದುವ್ಯಾದರ ತಮ್ಮ ಜಾತಿ ಹಾಳಾಗತೈತಿ. ಅಂತ ನನ್ನ ಗಂಡನ ಜಾತಿಯವರು, ಅವರು ಮನ್ಯಾಗಿಲ್ಲಾಗ ನನ್ನ ಜುಲುಮೀಲೇ ಎಳಕೊಂಡು ಬಂದಾರ.

ವಕೀಲ:– ಓಹ್ ! ಹೀಂಗದ ಏನದು. ನನಗ್ಗೊತ್ತಿರಲಿಲ್ಲಬಿಡು. ಅಂಥಾಗ ಅವರು ನಿಜವಾಗಿಯೂ ನಿನ್ಜೋತೀಗೆ ಮದುವ್ಯಾಗ್ಲಿಕ್ಕೆ ತಯಾರಿದ್ರ ?

ಅರುಂಧತಿ:— ತಯಾರಿರದಿದ್ರ ನಾನ್ಯಾಕ ಅವರ್ಹತ್ರ ಇರ್‍ತಿದ್ದೆ ? ಅವರದು ಎಷ್ಟು ದೊಡ್ಡ ಮನಸ್ಸೂ ಅನ್ನೂದು ನಿಮಗ ಗೊತ್ತಿಲ್ಲಾ. ಒಂದಿನಾ ನಾನು ಅವರಿಗೆ "ಈ ವರೆಗೂ ನಾನು ಪರಪುರುಷರ ಸಂಗದಿಂಗ ಮೂರ ದೀನಿ" ಅಂತಂದೆ. ಅದಕ್ಕವರು ಏನಂದ್ರನ್ನೂದು ಗೊತ್ತೈದs ನಿನ್ನಿಮಗ?

ವಕೀಲ – ಏನಂದ್ರು ?

**ಅರುಂಧತಿ:.** ಅವರಂದ್ರು ! "ಅರುಂಧತಿ, ನಿನ್ನ ಶೀಲದ ಬಗೆಗೆ ನನಗೆ ಎಷ್ಟೂ ಸಂಶಯವಿಲ್ಲ. ಒಂದು ವೇಳೆ ನಿನ್ನ ಶೀಲ ಭಂಗವಾಗಿದ್ದರೂ ನಾನು ನಿನ್ನೊಂದಿಗೆ ವಿವಾಹ ಮಾಡಿಕೊಳ್ಳುತ್ತಿದ್ದೆ. ಏಕೆಂದರೆ ನಿನ್ನ ಪರಿಸ್ಥಿತಿಯೇ ಹಾಗಿದೆ. ಅಂಥ ದುಸ್ಥಿತಿಯಲ್ಲಿ ಸಿಲುಕಿದ ತರುಣಿಯರಿಗೆ ಎರಡೇ ಎರಡು ಮಾರ್ಗಗಳಿರುತ್ತವೆ. ಆತ್ಮಹತ್ಯೆ ಇಲ್ಲವೆ ಬೀದಿಗಿಳಿಯುವದು; ಇವೆರಡನ್ನು ಬಿಟ್ಟರೆ ಬೇರೆ ಮಾರ್ಗವೇ ಇಲ್ಲ. ಅದಕ್ಕಾಗಿ ನೀನು ಹಗಲೆಲ್ಲ ನಿನ್ನ ಶೀಲದ ವಿಷಯವನ್ನು ನನ್ನೆದುರು ಹೇಳಬೇಡ" ಅಂದಿದ್ರು. ಅಂಥಾ ಗುಣದವರು ಎಷ್ಟ ಮಂದಿ ಸಿಗ್ತಾರ.

**ವಕೀಲ:–** ಅರುಂಧತಿ ! ನಂದು ತಪ್ಪಾತು. ಸಂಜೀವಮುಂದ ಸೆಕ್ರೆಟರಿ ಹೇಳಿದ್ದ ಆದರೂ "ಏನಾದದ್ದನ್ನ ನಾ ನೋಡಿಕೊಂಡೇನಿ" ಅಂತ ಹೇಳಿದ್ದೆ. ನಿನ್ನ ಹಿಸ್ಟ್ರೀ ಕೇಳಿದಮ್ಯಾಲ ಖರೇ ಹೇಳಬೇಕಂದ್ರ ನನಗ ಭಾಳ ಕೆಡಕನಸೇದ. ಇವತ್ತು ನೀನು ನನ್ನ ಕಣ್ಣು ತೆರಿಸಿ ಬಿಟ್ಟೆ.... (ಎಂದು ನುಡಿಯುತ್ತಿರುವಂತೆ ರಮಾಕಾಂತ, ಚಂದ್ರಶೇಖರ, ಪ್ರಮೀಲಾ ಮತ್ತು ಸುವರ್ಣರು ಪ್ರವೇಶಿಸುವರು. ಆಗ) ಬಾರಪಾ ರಮಾಕಾಂತಾ !

**ರಮಾಕಾಂತ:–** ವಕೀಲರs ! ನಿಮ್ಮ ಮನಸ್ಸು ಪರಿವರ್ತನ ಆದದ್ದು ನೋಡಿ ನನಗ ಬಹಾಳ ಆನಂದಾಗೇದರೀ.

**ವಕೀಲ:–** ನಾನೂ ಮನುಷ್ಯಾ ಆದೀನಪಾ ! ಅದೇನs ಇರ್ಲಿ. ಇನ್ಮುಂದೆ ನೀವು ನಡಿಸಿರೋ ಕಾರ್ಯಕ್ಕ ನಂದೂ ಬೆಂಬಲದs ಅಂತ ತಿಳಕೋರಿ

**ಪ್ರಮೀಲಾ:–** ಅರುಂಧತಿಯ ಮಾತಿನೊಳಗ ಇಷ್ಟು ಶಕ್ತಿ ಐತೀಂತ ನನಗ ಅನಿಸಿರಲಿಲ್ಲಣ್ಣಾ.

**ಚಂದ್ರಶೇಖರ:—** ತಂಗೀ! ಆ ಶಕ್ತೀನ ದೇವರs ಆಕೀಗೆ ಕೊಟ್ಟಾನನಬೇಕು.

**ಅರುಂಧತಿ:—** ದೇವರಲ್ಲಣ್ಣಾ ನಿಮ್ಮಂಥಾ ಅಣ್ಣಂದಿರು ಹಿಂದದೀರನ್ನೋ ಧೈರ್ಯಾನ ನನಗ ಅಂಥಾ ಶಕ್ತಿ ಕೊಟ್ಟೈತು.

**ರಮಾಕಾಂತ:–** ಅಷ್ಟು ದೊಡ್ಡ ಮಾತು ಆಡಬಾರದವಾ.

**ಸುವರ್ಣಾ:—** ಹೌದಣ್ಣಾ. ಅಕ್ಕ ಇಷ್ಟು ಮಾತಾಡಿದ್ದನ್ನ ನಾನು ಇವತ್ತs ಕೇಳೀನಿ. ಈಕಿ ಇಷ್ಟು ತಿಳಕೊಂಡಾಳ ಅನ್ನೋದನ್ನ ನಂಬೂದು ನನಗs ಕಷ್ಟಾಗಲಿಕ್ಕೆ ಹತ್ತೇದ.

ವಕೀಲ:– ಎಲ್ಲಾ ಟಾಯಿಮುವಾ ಆದು. ಪ್ರಸಂಗ ಎಲ್ಲಾರಿಗೂ ಮಾತಾಡ್ಲಿಕ್ಕೆ ಹಚ್ಚುದ. ಆಗಲಿ ಹೊತ್ತಾತು ಮನೀಗೆ ಹೋಗೂಣು ನಡೀರಿ.

ರಮಾಕಾಂತ:– ಚಂದ್ರೂ, ನೀನು ಅರುಂಧತೀನ್ನ ಮನೀತನಕಾ ಕಳಿಸಿ ಬಾ, ನಾನು ಪ್ರಮೀಲಾನ ಜೊತಿಗೆ ಹೋಗ್ತೀನಿ. (ಪ್ರಮೀಲಾ ಮತ್ತು ರಮಾಕಾಂತ ಇಬ್ಬರೂ ಹೋಗುವರು.)

ಸುವರ್ಣಾ:– ಚಂದ್ರಣ್ಣಾ ! ಇವತ್ತು ವಕೀಲರ ಭಾಷಣಾ ಹ್ಯಾಂಗಾತು ?

ವಕೀಲ:– ಯಾಕವಾ? ನೀನೂ ನನಗ ಹುಡುಗಾಟಾ ಮಾಡ್ಲಿಕ್ಕ ಹತ್ತಿದೇನು?

ಸುವರ್ಣಾ:– ಹಾಂಗೇನಿಲ್ರೀ, ಸುಮ್ನ ಕೇಳಿದೆ.

ಚಂದ್ರಶೇಖರ:– ಅಂದ್ರ ?

ಸುವರ್ಣಾ:– ಅಂದ್ರೇನು ? ರಾತ್ರೀ ಭಾಳಾತು. ಮನೀತನಕಾ ನಡಕೊಂತ ಹೋಗಬೇಕು. ಏನರೆ ಮಾತಾಡಿಕೊಂತ ಹೋದರ ದಾರಿ ಸಾಗತೈತಿ

ವಕೀಲ:– ದಾರಿ ಸಾಗೂದಕ್ಕ ನನ್ನ ವಿಷಯಾನ ಮಾತಾಡಬೇಕಾಗೇದೇನು. ಅಲ್ದs ಬಸ್ಸಿಗ್ಹೋಗಿ ಬಿಟ್ರಾತು. ಹತ್ತುಮಿನಿಟಿನ್ಯಾಗ ಮನೀ ಮುಟ್ಟ ಬಹುದು.

ಸುವರ್ಣಾ:– ಕಡೇ ಬಸ್ಸು ಹೋಗಿ ಭಾಳೊತ್ತಾತು. ಈಗ ಉಳಿದೀರೋದು ನಟರಾಜಾ ಸರ್ವೀಸೊಂದ. ನಡೀರಿ ಹೋಗೂಣು. ರಾತ್ರಿ ಭಾಳಾತು. (ಎಲ್ಲರೂ ಹೋಗುವರು.)

## ದೃಶ್ಯ ೭ ರಮಾಕಾಂತನ ಮನೆ

ಮಧ್ಯಮ ತರಗತಿಯ ಮನೆ, ಎಲ್ಲವೂ ಚೊಕ್ಕಟವಾಗಿ ಕಾಣುತ್ತಿದೆ. ಖುರ್ಚಿ–ಟೇಬಲ್ಲುಗಳೂ ವ್ಯವಸ್ಥಿತವಾಗಿ ಇಡಲ್ಪಟ್ಟಿವೆ. ವಿವೇಕಾನಂದರ ದೊಡ್ಡ ಭಾವಚಿತ್ರವಿದ್ದು, ಅದಕ್ಕೊಂದು ಪುಷ್ಪಮಾಲೆಯನ್ನು ಹಾಕಲಾಗಿದೆ. ಪಂಡಿತ ನೆಹರೂ, ಗಾಂಧೀಜಿಯವರ ಭಾವಚಿತ್ರಗಳೂ ಇವೆ. ಮುಂಜಾನೆ ಹನ್ನೊಂದು ಗಂಟೆಯ ಸಮಯ, ರಮಾಕಾಂತನು ಊಟ ಮುಗಿಸಿಕೊಂಡು, ಹೊರಗೆ ಹೋಗಲೋಸುಗ ಬಟ್ಟೆ ಧರಿಸಿ ಸಿದ್ಧನಾಗಿರುವಾಗ ಅವನ ತಂಗಿ ಪ್ರಮೀಲೆಯು ತನ್ನ ಅಣ್ಣನ ಹರಿದ ಜುಬ್ಬವನ್ನು ನೋಡಿ, ಸೂಜಿದಾರ ತೆಗೆದುಕೊಂಡು ಬಂದು–

ಪ್ರಮೀಲೆ:– ನಿನ್ನೆ ಕೆಲಸದ ಗಡಿಬಿಡಿಯೊಳಗ ಮರತಹೋತಣ್ಣ.

ರಮಾಕಾಂತ:- ಏನವಾ ಅದು ಮರತದ್ದು ?

ಪ್ರಮಿಲೆ:- ನಿನ್ನಂಗೀ ಹೊಲಿಯೂದು; ನಿನ್ನೆ ಒಗಿಯೂವುಂದ ಒಣಗಿದ ಮ್ಯಾಲ ಹೊಲೀಬೇಕೂ ಅಂದುಕೊಂಡೆ. ಆಮ್ಯಾಲ ಮರತ್ಹೋತು, ಸ್ವಲ್ಪ ಅಂಗೀ ಬಿಚ್ಚಿ ಕೊಡಮಾ, ನಿಂತಲ್ಲೇ ಹೊಲದು ಕೊಡತೀನಿ.

ರಮಾಕಾಂತ:- ಹೊಲೀತಿದ್ರ ನಡಿಯೂದಿಲ್ಲೇನು ?

ಪ್ರಮೀಲೆ:- ಹರದ ಅಂಗೀ ನೋಡಿ ಮಂದೇನಂದಾರು ?

ರಮಾಕಾಂತ:— ಮಂದೀದೇನು ಹೋಗತದ ? ಅಷ್ಟೂಮೀರಿ ಅವರು ಅಂಗಿ ಹರದ್ಯಾದಲ್ಲಾ ಅಂತ ಕೇಳಿದರ ಹರದದ್ದು ಬಿಟ್ಟು ಗಟ್ಟಿ ಇದ್ದದ್ದನ್ನ ನೋಡ್ರಿ ಅಂತ ಹೇಳ್ತೀನಿ ನಾನು

ಪ್ರಮೀಲೆ:— ಇಲ್ಲೆ ಬಿಚ್ಚಿಕೊಡಣ್ಣ, ನಾವು ಬಡವರಿರಬಹುದು. ಆದರ ಅದನ್ನ ಎಲ್ಲಾರಿಗೂ ತೋರಿಸಿಗೊಂತ ಹೋಗೂದರೊಳಗ ಏನರ್ಥದ ?

ರಮಾಕಾಂತ:— ಅಂದರ? ನಾನು ಬಡತನಾ ತೋರಿಸಿಗೊಂತ ಅಡ್ಯಾಡತೀನೇನು ?

ಪ್ರಮೀಲೆ:- ಮತ್ತೇನು ? ಹೀಂದ ಹರದಂಗಿ ಹಾಕ್ಕೊಂಡರ ನಮ್ಮ ಬಡತನದ ಪ್ರದರ್ಶನಾ ಮಾಡಿಧಂಗಲ್ಲೇನು ? ಅದಕ್ಕ ಲಗೂನ ಅಂಗಿ ಬಿಚ್ಚಿತಾ ಹೊಲದು ಬಿಡತೀನಿ.

ರಮಾಕಾಂತ:— (ಪ್ರಮೀಲೆಯ ಕೈಯೊಳಗಿನ ದಾರ ಪೋಣಿಸಿದ ಸೂಜಿಯನ್ನು ತೆಗೆದುಕೊಂಡು) ತಂಗೀ ನೀನು ಇಷ್ಟು ಹುಚ್ಚಿ ಅದೀದಿ ಅನ್ನೂದು ಗೊತ್ತಿದ್ದಿಲ್ಲ ಬಿಡು.

ಪ್ರಮೀಲೆ:— ಅಂದರ ?

ರಮಾಕಾಂತ:- ನಾವು ಬಡವರು ಹೌದಲ್ಲೋ.

ಪ್ರಮೀಲಾ:- ಹೌದು.

ರಮಾಕಾಂತ:- ಬಡತನದಂಥಾ ಕಡುವೈರೀನ್ನ ಎದುರಿಸಾಕ ಈಗ ನೀನು ಸೂಜಿ–ದಾರಾ ತೊಗೊಂಡು ಹೊರಟೀದಿ. ಅಂದ ಮ್ಯಾಲ ನಿನಗ ಹುಚ್ಚಿ ಅನಬೇಕೋ, ಶ್ಯಾಣ್ಯಾಕೆನಬೇಕೋ ?

ಪ್ರಮೀಲಾ:- ಬಡತನಾನ ಸೂಜೀಲೆ ಎದರಸಾಕ ಹೊರಟಿಲ್ಲಣ್ಣ ! ಆದರ ನೋಡಿದವರು ಏನಾರೆ ಅನಬಾರದೂ ಅಂತ ಹಾಂಗ್ಹೇಳಿದ್ದು.

ರಮಾಕಾಂತ:– ನೋಡಿದವರು ಏನಾರೆ ಅನಥಾಂಗ ನಡಕೊಳ್ಳೂದು ಹಗರ ಕೆಲಸೈತೀಂತ ತಿಳ್ದೀ ಏನ್ನೀನು ?

ಪ್ರಮೀಲಾ:- ಯಾಕಣ್ಣ ?

ರಮಾಕಾಂತ:– ಜಗತ್ತು ಅಂದ್ರ ಹುಚ್ಚರ ಸಂತಿ ಇದ್ದರಿಗ ; ಇಲ್ಲಿ ಎಲ್ಲಾರಿಗೂ ಬೇಕಾಗೂ ಹಂಗ ಇರೂದುಯಾರಿಂದಾನೂ ಸಾಧ್ಯಿಲ್ಲ.

ಪ್ರಮೀಲೆ:- ಯಾಕ ?

ರಮಾಕಾಂತ:— ನಮುಗ ಯಾರೂ ಏನೂ ಅನಬಾರ್ದು ಅಂತ ತಿಳಕೊಂಡು ಎಲ್ಲಾರಿಗೂ ಬೇಕಾಗೂಹಾಂಗಿರೂದು ದೇವರಿಂದಾನೂ ಅಗೂದಿಲ್ಲಂಗೀ!

ಪ್ರಮೀಲೆ:— ಎಲ್ಲಾರಿಗೂ ಬೇಕಾಗೂಹಾಂಗಿರೂದು ದೇವರಿಂದಾನೂ ಆಗೂದಿಲ್ಲಂತೀಯಾ ?

ರಮಾಕಾಂತ:— ಹೌದವಾ ! ಈ ಜಗತ್ತಿನ್ಯಾಗ ದೇವರ್ನ ಬಯ್ಯುವರು ಎಷ್ಟುಮಂದಿ ಅದಾರನ್ನೂದು ನಿನಗ ಗೊತ್ತಿಲ್ಲೇನು ?

ಪ್ರಮೀಲಾ:– ಎಲ್ಲಾರಿಗೂ ಬೇಕಾಗೂಹಂಗಿರೋದು ಆಗೂದಿಲ್ಲಂತ ತಿಳದು ನಮ್ಮಮನಸ್ಸಿಗೆ ಬಂಥಂಗ ನಡೀಬೇಕೇನು ?

ರಮಾಕಾಂತ:-- ಮನಸ್ಸಿಗೆ ಬಂಧಂಗ ನಡೀಬೇಕಂತ ನಾ ಹೇಳೂದಿಲ್ಲ. ನಾವು ಸತ್ಯದ ದಾರಿ ಬಿಡದಿದ್ರಾತು. ಯಾರೇನಂದುಕೊಂಡ್ರ ನಮಗೇನಾಗೂದೈತಿ ?

ಪ್ರಮೀಲಾ:– ಹಾಂಗಲ್ಲಣ್ಣ; ನಾ ಹೇಳಿದ್ದು ಆ ಸುದ್ದಿಲ್ಲ. ಈಗ ನಿನ್ನ ಜುಬ್ಬಾ ಹರದೈತಿ. ಅದನ್ನ ಹಂಗs ಹಾಕ್ಕೊಂಡು ಅಡ್ಡಾಡಿದರ ಜನರೇನಂದಾರೂಂತ ಹೇಳಿದೆ.

ರಮಾಕಾಂತ:— ಅವರ್ಯಾಕಂತಾರ. ಅನ್ನೂವವರು ನಮುಗ ಕೊಟ್ಟು ನಡಸ್ತಾರೇನು ?

ಪ್ರಮೀಲಾ:— ಕೊಟ್ಟು ನಡಸೂದಲ್ಲಣ್ಣ, ಮಂಸಿಯೊಳಗ ತಂಗಿ ಹೊಲಿಗೀ ಕ್ಲಾಸು ನಡಸ್ತಾಳೆ, ಅಣ್ಣನ ಅಂಗೀ ಹೊಲದಿಲ್ಲನೋಡೂ ಅಂತ ನನಗ ಹೆಸರಿಡ್ತಾರ. ಅದಕ್ಕೇಳಿದೆ.

ರಮಾಕಾಂತ:- ಹೀಂಗೇನು ? ಹಾಂಗಿದ್ರ ಹೊಲದು ಕೊಡವಾ. ನಾನಂತೂ ಯಾಕ ಬ್ಯಾಡನ್ನಿ ? (ಎಂದು ನುಡಿದು ಅಂಗಿಯನ್ನು ಬಿಚ್ಚಿ ತಂಗಿಯ ಕೈಗೆ ಕೊಟ್ಟು ಬೇರೊಂದು ಅಂಗಿಯನ್ನು ಹಾಕಿ ಕೊಳ್ಳುತ್ತ) ಒಳ್ಳೇದು

ನಾನಿನ್ನ ಬರ್ತೀನವಾ. ಟ್ಯೂಶನ್ ಕ್ಲಾಸಿಗೆ ಹೋಗತೀನಿ. ಸ್ಟುಡಂಟ್ಸ್ ನನ್ನಾದರೀ ನೋಡ್ತಿರಬೇಕು.

ಪ್ರಮೀಳಾ:– ಹೌದಣ್ಣ. ಹೊತ್ತಾಗತೈತಿ ಹೋಗು. ಹೊಲಿಗೀ ಕ್ಲಾಸಿಗೂ ಹುಡಿಗೇರು ಬರೋ ಹೊತ್ತಾತು.

ರಮಾಕಾಂತನು ಹೊರಗೆ ಹೊಗಲು ಸಿದ್ಧನಾಗಿರುವ ಹೊತ್ತಿಗ ಚಂದ್ರಶೇಖರನು ಕೈಯೊಳಗೊಂದು ದಿನ ಪತ್ರಿಕೆಯನ್ನು ಹಿಡಿದು ಕೊಂಡು ಬಂದು—

ಚಂದ್ರಶೇಖರ:– ರಮಾಕಾಂತ ; ಇವತ್ತಿನ ಪೇಪರು ಓದೀದೇನ್ನೀನು ?

ರಮಾಕಾಂತ:– ಇಲ್ಲ, ಯಾಕ ?

ಚಂದ್ರಶೇಖರ:– ನಿನ್ನೀ ರಿಪೋರ್ಟು ಬಂದೈತಿ ಸರೊಳಗ.

ರಮಾಕಾಂತ:– ಯಾವುದು ?

ಚಂದ್ರಶೇಖರ:– ಮತ್ತಿನ್ಯಾವದು ? ನಿನ್ನೆ ನಮ್ಮೂರೊಳಗಿನ ದೊಡ್ಡ ದೊಡ್ಡ ಮುಖಂಡರು ರಾಷ್ಟ್ರೀಯ ರಕ್ಷಣಾ ನಿಧಿ ಕೂಡಸಾಕ ಊರ ತುಂಬಾ ತಿರಿಗ್ಯಾಡಿದರಲ್ಲ. ಅದರದು.

ರಮಾಕಾಂತ:– ಹೀಂಗೇನು ? ಏನ ರಿಪೋರ್ಟ ಮಾಡ್ಯಾರವರ್ದು ?

ಚಂದ್ರಶೇಖರ;– ಅದನ್ನ ಹಿಂದೇಗಡಾ ಹೇಳ್ತೀನಿ. ನಿನ್ನೆ ಅವರಕೂಡ ಸಂಜೀ ತನಕಾ ನಾವು ಇದ್ವಿಲ್ಲೋ ?

ರಮಾಕಾಂತ– ಹೌದು ಇದ್ವಿ.

ಚಂದ್ರಶೇಖರ:– ಹಾಂಗಿದ್ರ ನಿನ್ನೆ ಕೂಡಿದ ರೋಖ ಹಣ ಮತ್ತು ಬಂಗಾರ ಅಜಮಾಸ ಎಷ್ಟಿರಬಹುದು ?

ರಮಾಕಾಂತ:– ನಿನ್ನೆ ರಾತ್ರಿ ಮನೀಗೆ ಬರೂ ಮುಂದ ನಿನಗ ಹೇಳ್ಳಿಲ್ಲೇನು ?

ಚಂದ್ರಶೇಖರ:– ಹೇಳಿದಿ ಖರೆ. ಈಗ ಮತ್ತೊಮ್ಮೆ ಹೇಳಲ್ಲಾ !

ರಮಾಕಾಂತ:– ಯಾಕ ?

ಚಂದ್ರಶೇಖರ:– ಹಗಲೆಲ್ಲಾ ಯಾಕಂತತ ಕೇಳಬ್ಯಾಡಾ. ಮೊದ್ಲ ನಾ ಕೇಳಿದ್ದು ಹೇಳು.

ರಮಾಕಾಂತ—ಯಾಕವತ್ತು ನಿನಗ ಹುಚ್ಚುನಾಯಿ ಏನರ ಕಡದೈತೇನ್ಮತ್ತ?

ಚಂದ್ರಶೇಖರ— ಯಾಕಪಾ ?

ರಮಾಕಾಂತ:– ಯಾಕಂದ್ರೇನು ? ನಿನ್ನೆ ರಾತ್ರಿ ಹೇಳಿದ ಮಾತ್ನ ಮತ್ತೀಗ ಹೇಳೂ ಅಂತೀದಿ- ಅದಕ್ಕ ಸಂಶಯ ಬಂದು ಹೀಂಗನಬೇಕಾತು.

ಚಂದ್ರಶೇಖರ – ಏನರಾ ಕಡದೈತಂತ ತಿಳ್ಕೊಂಡು ಹೇಳು.

ರಮಾಕಾಂತ:– ಹ್ಞಾ. ನಿನ್ನೆ ಸಂಗ್ರಹ ಎಷ್ಟಾಗಿರಬಹುದೂ ಅನ್ನೋದನ್ನ ಹೇಳಬೇಕು ಹೌದಲ್ಲೋ?

ಚಂದ್ರಶೇಖರ:– ಹೌದು.

ರಮಾಕಾಂತ:– ನಾನು ನೋಡೀರೂ ಹಂಗ, ಎರಡೂವರಿನೂರು ತೊಲಿ ಬಂಗಾರ ಮತ್ತ ರೋಖು ಕನಿಷ್ಟ ಹತ್ತು ಸಾವಿರ ರೂಪಾಯಿ ಕೂಡಿರ ಬೇಕು.

ಚಂದ್ರಶೇಖರ:– ಹೌದಲ್ಲೊ ?

ರಮಾಕಾಂತ:– ಹೌದು.

ಚಂದ್ರಶೇಖರ:– ಹಾಂಗಿದ್ರ ಈ ಪೇಪರಿನ್ಯಾಗ ಬಂದಿರೋ ಅಂಕಿ ಸಂಖೆ ನೋಡಂಗಾದರ. (ಎಂದು ನುಡಿದು ಪತ್ರಿಕೆಯನ್ನು ಕೊಡಲು ಹೋಗುವನು.)

ರಮಾಕಾಂತ:– ಅದನ್ನ ಓದಿಕೊಂತ ಕೂಡಾಕ ನನಗ ಪುರಸೊತ್ತಿಲ್ಲ—ನೀ ಓದೀದಲ್ಲ? ನೀನs ಹೇಳಿಬಿಡಲ್ಲಾ !

ಚಂದ್ರಶೇಖರ:– ಇಪ್ಪತ್ತೈದು ತೊಲಿ ಬಂಗಾರ ಮತ್ತ ಒಂಭೈನೂರು ರೂಪಾಯಿ ಕೂಡ್ಯಾವಂತ ಬರದಾರ.

ರಮಾಕಾಂತ:– ಹೌದು, ಖರೇ ಅದ ಅದು.

ಚಂದ್ರಶೇಖರ:– ಅಂದ್ರ ?

ರಮಾಕಾಂತ:– ಅಂದ್ರೇನೋ ಮಳ್ಳ ? ಅಷ್ಟರ ಸರಕಾರಕ್ಕ ಜಮಾಮಾಡ್ಯಾ ರಲ್ಲಾ ಅಂತ ನಾವು ಸಂತೋಷಪಡಬೇಕು.

ಚಂದ್ರಶೇಖರ;—ಯಾಕ ?

ರಮಾಕಾಂತ:—ಯಾಕಂದ್ರೇನು ? ಏನೇನೂ ಸಂಗ್ರಹ ಆಗ್ಲಿಲ್ಲಾಂತ ಹೇಳಿದ್ರ ನಾವೇನು ಮಾಡ್ತಿದ್ವಿ ?

ಚಂದ್ರಶೇಖರ:—ಹಾಂಗ್ಯಾಕ್ಯಂಗ ಹೇಳತಾರ? ಎಲ್ಲಾರೆದುರಿಗೆ ಓಣಿ ಓಣಿ ತಿರಗಿ ಕೂಡಿಸಿದ್ದನ್ನ ಎತ್ತಿಹಾಕಾಕ ಧೈರ್ಯರ್ಣನರಾ ಹ್ಯಾಂಗ ಬರತೈತಿ ?

ರಮಾಕಾಂತ:—ಅಲ್ಲೋ! ಧಡಧಡೀತ ಎರಡನೂರು ತೊಲಿ ಬಂಗಾರಾ ಒಂಭತ್ತು ಸಾವಿರ ರೂಪಾಯಿ ಎತ್ತಿಹಾಕಿದವರಿಗೆ ಉಳಿದದ್ದನ್ನೂ ನುಂಗಾಕ ಬರ್ತಿದ್ದಿಲ್ಲಂತ ತಿಳ್ದೀ ಏನು? ಆದರೂ ಅವರು ಎಲ್ಲಾ ತಾವ ತಿನಬಾರದ್ದೂ ಅಂತ ಪ್ರಾಮಾಣಿಕತನದಿಂದ ಅಷ್ಟರಾ ಸರಕಾರಕ್ಕ ಮುಟ್ಟಿಸ್ಯಾರ ಅದ್ಕ ಒಂದು ದೊಡ್ಡ ಉಪಕಾರ ಅಂತ ತಿಳಕೋ.

ಚಂದ್ರಶೇಖರ:—ಅಲ್ಲೋ, ಸೀಲ ಮಾಡಿದ ಡಬ್ಯಾಗ ಮುಂದಿ ಹಣಾ ಹಾಕಿದ್ರು. ಅವ್ಹ್ಯಾಂಗ ಕಡಿಮ್ಯಾದ್ವು?

ರಮಾಕಾಂತ:—ನೀ ಎಷ್ಟು ಹುಚ್ಚದೀಯೋ ಚಂದ್ರು? ಸೀಲು ಒಡಿಯಾಕ ಆಪರಿ ನು ಹುಚ್ಚಂತ ತಿಳಿದೀ ಏನು?

ಚಂದ್ರಶೇಖರ:—ಸೀಲು ಒಡೀದಿದ್ರ ಹಂಗs ಹ್ಯಾಂಗ ತಕ್ಕೊಂತಾರ?

ರಮಾಕಾಂತ:— ಅದಕ್ಕs ನಿನಗ ಹುಚ್ಚಾ ಅನ್ನೂದು, ಅಲ್ಲೋ, ಸೀಲು ಮ್ಯಾಲೆ ಮಾಡಿರತಾರ, ಕೆಳಗಿನಿಂದ ಹಣಾ ತೊಕ್ಕೊಳ್ಳಾಕ ಬರೂ ಹಾಂಗ ಆರೇಂಜಮೆಂಟ ಮಾಡಿರ್ತಾರ, ಅಂದಾಗ ಅವರಿಗೇನು ಹೆದರಿಕೆ? ಅದರೊಳಗಿನ ಹಣಾ ತೊಕ್ಕೊಂಡು ಸೀಲ ಮಾಡಿದ ಖಾಲೀ ಡಬ್ಬಿ ಗೋಳ್ನ ಕಚೇರ್ಯಾಗ ಜಮಾ ಮಾಡಿಬಿಡ್ತಾರ. ಅಲ್ಲಿಗೆ ಅವರ ಕೆಲಸಾ ಮುಗಧೋತು.

ಚಂದ್ರಶೇಖರ:– ಅಧಿಕಾರಿಗಳರಾ ಇದನ್ನ ಚೆಕ್ ಮಾಡಬಾರ್ದೇನು?

ರಮಾಕಾಂತ:— ತಮ್ಮಾ! ಅಷ್ಟು ದೊಡ್ಡ ಮುಖಂಡರ ಮ್ಯಾಲ ಸಂಶಯ ಕಟ್ಟಿದರ ಆ ಅಧಿಕಾರಿಗಳು ಬಾಳೂದ ಕಷ್ಟಾಗಿ ಬಿಡತೈತಿ. ಅದಕ್ಕವರು ಗೊತ್ತಿದ್ರೂ ಇಲ್ಲದವರ್ಹಂಗ ಸುಮ್ನ ಇರಬೇಕಾಗತೈತಿ.

ಚಂದ್ರಶೇಖರ:– ರಮಾಕಾಂತ! ಇವತ್ತು ನಮ್ಮ ನಾಡಿನ ಪರಿಸ್ಥಿತಿ ಎಷ್ಟು ಸೂಕ್ಷ್ಮೈತಿ, ಇಂಥಾದರೊಳಗ ಈ ಮುಖಂಡರು ಹೀಂಗಮಾಡತಾರಲ್ಲಾ ಇವರಿಗೆ ಕೇಳವರs ಇಲ್ಲೇನು?

ರಮಾಕಾಂತ:– ಚಂದ್ರೂ, ಮೊದ್ಲ ನಮ್ಮ ಜನಾ ಶ್ಯಾಣ್ಯಾರಾಗಬೇಕು. ಅವರಿಗೆ ಬುದ್ಧಿ ಬರೂತನಾ ಇದು ಹಿಂಗs ನಡಿಯೂದ.

ಚಂದ್ರಶೇಖರ:– ಅಂದ್ರ, ಇದೂ ಜನರದs ತಪ್ಪೂ ಅಂತೀಯೇನು?

ರಮಾಕಾಂತ:– ಹೌದು.

ಚಂದ್ರಶೇಖರ:– ಅದು ಹ್ಯಾಂಗ ?

ರಮಾಕಾಂತ:— ಮೊದಲು ನಮ್ಮ ಜನಾ ಮುಖಂಡರ ಮ್ಯಾಲಿಟ್ಟಿರೋ ಅಂಥಶ್ರದ್ಧಾನ ಕಿತ್ತೊಗೀಬೇಕು. ಅಂದ್ರ ಅವರಿಗೆ ಮರ್ಯಾದೀನ ಕೊಡಬಾರದೂ ಅಂತಲ್ಲ. ಆದರ ಅವರು ಏನೇನ ಮಾಡತಾರ, ಅನ್ನೊದರ ಮ್ಯಾಲ ಕಣ್ಣಿಡಬೇಕು. ಅವರು ಮಾಡಿದ ಹಲಕಟ್‌ಗಿರಿ ಕಂಡಬಂದ್ರ ಭಿಡೇ ಬಿಟ್ಟು ಮರ್ಯಾದೀ ಕಳೀಬೇಕು. ಹೀಂಗ ಒಂದಿಬ್ಬರಿಗೆ ಮಾಡಿದರ ಎಲ್ಲಾರಿಗೂ ಬುದ್ಧಿ ಬರತೈತಿ.

ಚಂದ್ರಶೇಖರ:– ಜನರು ಹಂಗ್ಯಾಕ ಮಾಡಾಕೊಳ್ಳೋಗ್ತಾರ, ಅವರೂ ತಮ್ಮ ಬ್ಯಾಳಿಬೇಸಿಗೋ ಬೇಕನ್ನವರು.

ರಮಾಕಾಂತ:— ಹೌದು ಅಂಥವರ ವಶೀಲಿ ಹಚ್ಚಿ ತಮ್ಮ ಕೆಲಸಾ ಮಾಡಿಸಿಗೊಳ್ಳವ್ರು ಇರತಾರಂದಾಗ ಅವ್ರ್ಯಾಕ ಇಂಥಾ ಕೆಲಸಕ್ಕ ಕೈ ಹಾಕ್ತಾರಾ ?

ಚಂದ್ರಶೇಖರ:– ಅಂದ್ರ ? ಇದು ಹಿಂಗs ನಡಿಯೂದs ಅನ್ನು.

ಪ್ರಮೀಲಾ:– ಹೌದಣ್ಣಾ ! ನಮ್ಮ ಜನಾ ಸುಧಾರಿಸೋತನಕಾ ಇದು ಹಿಂಗs ನಡಿಯೂದ ?

ಚಂದ್ರಶೇಖರ:–ಇಲ್ಲವಾ! ಇವತ್ತು ನಮ್ಮ ರಾಷ್ಟ್ರದ ಸುತ್ತ–ಮುತ್ತ ವೈರಿಗಳು ಎದ್ದು ಕುಂತಾರ. ಇಂಥಾದರಾಗ ನಮ್ಮುಖಂಡ್ರು ಹೀಂಗ ನೋಡಿಕೊಂತ ಹೋದರ ದೇಶದ ಗತೀ ಏನು ?

ಪ್ರಮಿಲಾ:– ಅದಕ್ಕs ನಮ್ಮುಖಂಡ್ರು ಆಡಳಿತದೊಳಗ ಬದಲಾಗಬೇಕು, ಅಧಿಕಾರದ ಮೋಹ ದೂರ ಮಾಡಿ ದೇಶ ಸೇವಾಕ್ಕ ನಿಲ್ಲಬೇಕು ಅಂತ ಹೇಳ್ತಿತ್ಯಾರಲ್ಲಾ !

ರಮಾಕಾಂತ:– ಯಾರೇನ ಹೇಳಿದರೂ ಅದು ನಿಲ್ಲೂದಿಲ್ಲಾ. ಇದೆಲ್ಲಾ ನಿಲ್ಲಬೇಕಾದರ ಒಂದs ಒಂದುಪಾಯ ಐತಿ.

ಪ್ರಮಿಲಾ–ಚಂದ್ರಶೇಖರ:– (ಇಬ್ಬರೂ) ಅದ್ಯಾವದು ?

ರಮಾಕಾಂತ:– ಒಂದೈತದು, ಅದನ್ನ ಕಾರ್ಯರೂಪಕ್ಕ ತರೂದು ಅಷ್ಟು ಸಪ್ಪಾನೂ ಇಲ್ಲಾ. ಆದರ ತರವರೊಂದುಬೇಕು.

ಚಂದ್ರಶೇಖರ;– ಅದ್ಯಾವದು. ಹೇಳಿರಾ ಹೇಳಲ್ಲಾ!

**ರಮಾಕಾಂತ**– ಅದರ. ಈಗೇನಿಗ ಬಂಗ್ಲೆ ಕಟ್ಟಿಸಿಗೊಂಡು ಕಾರಿನ್ಯಾಗ ಓಡ್ಯಾಡತಾರಲ್ಲಾ, ನಮ್ಮ ಖಂಡ್ರು, ಅವರೆಲ್ಲಾ ಸ್ವಾತಂತ್ರ್ಯ ಸಿಗೂದ ಕಿಂತಾ ಮೊದ್ಲ ಹ್ಯಾಂಗಿದ್ರು, ಅವರ ಉತ್ಪನ್ನ ಎಷ್ಟಿತ್ತು? ಆಸ್ತಿ ಎಷ್ಟಿತ್ತೂ ಅನ್ನೂದನ್ನ ತಿಳಕೊಂಡು ಬಿಟ್ರ ಸಾಕು.

**ಪ್ರಮೀಳಾ**:– ಅದರಿಂದೇನಾಗತೈತಿ?

**ರಮಾಕಾಂತ**:– ಆಗ ಹಾಂಗಿದ್ದವರು, ಈಗ ಹ್ಯಾಂಗ್ಯಾಗ್ಯಾರ ಅನ್ನೂದು ಗೊತ್ತಾಗತೈತಿ. ಏನೂ ದುಡೀಲಾರದs, ವ್ಯಾಪಾರಾ–ಉದ್ಯೋಗಾ ಮಾಡದs ಇಷ್ಟ ಆಸ್ತಿ ಹ್ಯಾಂಗಬಂತೂ ಅಂತ ಕೇಳಿದರ ಎಲ್ಲಾ ಹೊರಗ ಬರತೈತಿ. ಹೀಂಗೊಂದ ಹತ್ತ ಜನರಿಗೆ ಮಾಡಿದರ ಎಲ್ಲಾರ ಹುಳುಕೂ ಹೊರಬಿದ್ದು ಬಿಡತಾವು. ಮುಂದ ಇಂಥಾ ಕೆಲಸಾ ಮಾಡವರಿಗೂ ಹೆದರಿಕರತೈತಿ

**ಚಂದ್ರಶೇಖರ**:– ಖರೆ, ನೀ ಹೇಳೂದು ಖರೇ ಐತಿ. ಆದರ ನಮ್ಮ ಖಂಡ್ರ್ನ ಹಾಂಗ ಕೇಳವರೊಂದು ಬೇಕಲ್ಲ?

**ರಮಾಕಾಂತ**:– ಹಾಂಗ ಕೇಳವರು ಇವತ್ತು ಇರಾಕಿಲ್ಲ. ಮುಂದೊಂದುದಿನ ಹುಟ್ಟೀಹುಟ್ತಾರ ಕೇಳವರು.

**ಪ್ರಮೀಲಾ**:– ಅಲ್ಲೀತನಕಾ ತಡೀಬೇಕಂತೀ ಏನಣ್ಣಾ!

**ರಮಾಕಾಂತ**:– ಹೌದು ಮತ್ತ. ಎಲ್ಲಾದಕೂ ಅವಕಾಶ ಬೇಕsಬೇಕು. ಅದು ಹೋಗ್ಲಿ ಬಿಡು ಸ್ಟುಡಂಟ್ಸ್ ನಂದಾರೀ ನೋಡ್ತಿರಬೇಕು ನಾ ಹೋಗ್ತೀನಿ ನಡೀ ಚಂದ್ರೂ ಹೋಗೂಣು

**ಚಂದ್ರಶೇಖರ**:– ಆಗಲಿ ನಡಿ, ಹೋಗೂಣು. (ಹೋಗುವರು)

## ದೃಶ್ಯ ೮ ಜಂಗಲ್

ವಕೀಲ, ಡಾಕ್ಟರ ಮತ್ತು ಶ್ರೀ ಶಿವೋತ್ತಮರಾಯರು ಕುಳಿತುಕೊಂಡು ಮಾತನಾಡುತ್ತಿದ್ದಾರೆ

**ಡಾಕ್ಟರ**:– ಶಿವೋತ್ತಮರಾಯರೆ! ರಮಾಕಾಂತನ ಹಾವಳಿ ದಿನದಿನಕ್ಕ ಹೆಚ್ಚಾಗ್ಲಿಕ್ಹತ್ತೇದ ಏನರ ಸ್ವಲ್ಪ ವ್ಯವಸ್ಥಾ ಮಾಡ್ರೆಲಾ.

**ಶಿವೋತ್ತಮ**:– ಹೌದರಿ! ನನಗೂ ಅವ್ನಾ ಸಂಗಲಾರದ ತುತ್ತಾಗ್ಯಾನ.

ಡಾಕ್ಟರ:— ಏನು ? ಅವನಿಗೆ ಬುದ್ಧಿ ಕಲಸೂದು ನಿಮ್ಮಿಂದಾನೂ ಆಗೂದಿಲ್ಲs.

ಶಿವೋತ್ತಮ:— ಹೌದರಿ. ಪರಿಸ್ಥಿತಿ ಹಂಗs ಅದ.

ಡಾಕ್ಟರ— ಅಲ್ರೀ, ನಿಮ್ಮ ಕೈಯಾಗ ನೂರಾ ಎಂಟ್ಮಂದಿರತಾರ. ಕಾಂಗ್ರೆಸ್ಸಾ ಎಮ್ಮೆಲ್ಲೇ ಅಂದ್ರ ರಾಜಾ ಇದ್ಧಂಗ್ರೆಪಾ. ಹಿಂಗಿದ್ದೂ........

ಶಿವೋತ್ತಮ— ರಾಜಾ ಖರೆ. ಆದರ ಅವನ ಮುಂದ ನಮ್ದೇನೂ ನಡೀವಲ್ದು. ಅವನ್ನಾ ಏನರೆ ಒಂದು ತಪ್ಪು ಮಾಡಿದರ ಸಾಕು. ಹಾಕ್ಲಾಕ ತುಳೀ ಬೇಕಂತೀನಿ. ಆದ್ರ ಸಿಗವಲ್ಲಾ.

ಡಾಕ್ಟರ— ಪೋಲೀಸರಿಗೇರಾ ಹಚ್ಚಿ ಅವನ ಕೆಲಸಾ ಮುಗಸಬೇಕು.

ಶಿವೋತ್ತಮ— ಪೋಲೀಸರೂ ಅದೊಂದು ಕೆಲಸಾ ಬಿಟ್ಟು ಬ್ಯಾರೇ ಏನರಾ ಹೇಳ್ರಿ ಮಾಡ್ತೇವಿ. ರಮಾಕಾಂತನ ಸುದ್ದೀ ತಗೀ ಬ್ಯಾಡ್ರಿ ಅಂತಾರ.

ಡಾಕ್ಟರ— ಅಂದ್ರ ? ಅವರೂ ಅಂವಗ ಹೆದರ್ತಾರೇನು ?

ವಕೀಲ—ರಮಾಕಾಂತಗ ಪೋಲೀಸರು ಹೆದರೂದಿಲ್ರೀ, ಅವನಲ್ಲಿರೂ ದೊಡ್ಡ ಗುಣಕ್ಕ ತಲೀ ಬಾಗಸ್ತಾರ ಪೋಲೀಸ್ ಡಿಪಾರ್ಟಮೆಂಟಿನವರು ಅಂದ್ರ ಪಶುಗಳಲ್ಲ. ಅವರೂ ಮನುಷ್ಯರ!

ಡಾಕ್ಟರ— ನೀವು ಅವನ ಕಡೀ ತಿರಗೀರಿ ಅನ್ನೂದು ಗೊತ್ತಿತ್ತು. ಆದರ ಅವನ ಪ್ರಭಾವ ನಿಮ್ಯಾಲ ಇಷ್ಟು ಬಿದ್ದsದ ಅನ್ನೂದು ಗೊತ್ತಿರಲಿಲ್ಲ.

ಶಿವೋತ್ತಮ— ಇದನ್ನ ಇಷ್ಟಕ್ಕ ಮುಗಿಸಿಬಿಡ್ರಿ. (ಎಂದು ನುಡಿಯುತ್ತಿರುವಾಗ ಸೆಕ್ರೆಟರಿಯು ನರ್ತಕಿಯೊಂದಿಗೆ ಬರುವನು).

ಡಾಕ್ಟರ— ಎಷ್ಟೊತ್ತೋ ಅದು ?

ಸೆಕ್ರೆಟರಿ— ಹೌದ್ರೀ ಮತ್ತ. ಟಾಂಗಾದವಂಗ ಅಲ್ಲೇ ಬಿಟ್ಟು ಇಲ್ಲೀತನಕಾ ನಡಕೊಂತಬರಬೇಕಾದರ ಹೊತ್ತಾತು. ನೀವೇನು ಖುರ್ಚಿಗಿರ್ಚಿ ಎಲ್ಲಾ ತಂದೀರೆಲ್ಲಾ ?

ವಕೀಲ:— ಜೀಪಿನ್ಯಾಗ ಹಾಕ್ಕೊಂಡು ಬಂದ್ವಿ.

ಸೆಕ್ರೆಟರಿ— ಹಾಂಗಾದರ ನೀವೆಲ್ಲಾ ಜೀಪಿನೊಳಗs ಬಂದ್ರೇನು ?

ಡಾಕ್ಟರ— ಹೌದು ಮತ್ತ ಜೀಪು ಯಾತಕ್ಕಿರತಾದಂತ ತಿಳ್ದೀದಿ ?

ಸೆಕ್ರೆಟರಿ— ಹೌದೇಳ್ರಿ, ಸರಕಾರೀ ಜೀಪು ಇರೂದ ಇಂಥಾ ಕೆಲಸಕ್ಕ, ಹೋಗ್ಲಿ ಬಿಡ್ರಿ. ಡ್ಯಾನ್ಸ ಸುರುವು ಮಾಡವಾ ನೀನು.

(ಸಿನೇಮಾ ಪದ್ಧತಿಯು ನೃತ್ಯ ನಡೆಯುವದು. ವಕೀಲ, ಡಾಕ್ಟರ ಮತ್ತು ಶಿವೋತ್ತಮರಾಯರು ಕುಡಿತದ ಜೊತೆಗೆ ಕುಣಿತವನ್ನೂ ಮಾಡುವರು ಅದು ಮುಗಿದೊಡನೆ ಎಲ್ಲರೂ ಹೋಗುವರು.)

## ದೃಶ್ಯ ೯—ಬೀದಿ

ಸಂಪೂರ್ಣ ಖಾದೀ ಧಾರಿಗಳಾದ ಶ್ರೀ ಶಿವೋತ್ತಮರಾಯರು ಸೆಕ್ರೆಟರಿಯೊಂದಿಗೆ ಪ್ರವೇಶಿಸುವರು. ಜೊತೆಗೆ ಡಾಕ್ಟರರೂ ಇದ್ದಾರೆ.

ಸೆಕ್ರೆಟರಿ— ಡಾಕ್ಟರ! ರಾಯರ ಭಾಷಣಾ ಅರ್ಭಾಟಾತು, ಯಾಕ್ರಿ?

ಡಾಕ್ಟರ— ಶಿವೋತ್ತಮರಾಯರ ಭಾಷಣ ಅಂದಮ್ಯಾಲ ಕೇಳೋದೇನದ?

ಸೆಕ್ರೆಟರಿ— ನನಗಂತೂ ರಾಯರ ನಾಲಗೀಯೊಳಗ ಸರಸ್ವತೀನ ವಾಸ ಮಾಡ್ಯಾಳೇನೋ ಅಂತ ಅನಸ್ತದ

ಶಿವೋತ್ತಮ— ಸರಸ್ವತಿ ವಾಸ ಮಾಡೀರೂದು ನನ್ನ ನಾಲಗ್ಯಾಗಲ್ಲಪಾ, ಮನಸ್ಸಿನ್ಯಾಗ.

ಸೆಕ್ರೆಟರಿ— ಅಂದ್ರ? ತಾವು ಹೇಳೂದು ನನಗ ತಿಳೀಲಿಲ್ಲರೀ ರಾಯರ!

ಡಾಕ್ಟರ:– ತಿಳೀಲಿಕ್ಕೆ ಅದರೊಳಗೇನದನೋ? ಇವರ ಭಾಷಣ ಕೇಳೂದಕ್ಕ ಶೀರಿಗಳು ಹೆಚ್ಚು ಬಂದ್ವು ಅಂದ್ರ ಮುಗಧೋತು. ಗಟಾರದೊಳಗಿನ ನೀರು ಹರಧಾಂಗ ಹರೀತದ ಇವರ ವಾಣಿ.

ಸೆಕ್ರೆಟರಿ:– ಅಂದ್ರ? ಇವರೂ ಅವರsಹಂಗಾದರ?

ಡಾಕ್ಟರ:– ಇವರೂ ಅವರs ಆಗದಿದ್ರ ಇವರಿಗೆ ಶ್ರೀ ಶಿವೋತ್ತಮರಾಯರೂಂತ ಹೆಸರ್ಯಾಕ ಬರ್ತಿತ್ತು?

ಸೆಕ್ರೆಟರಿ:– ನನಗ್ಗೊತ್ತಿದ್ದಿಲ್ಲ ಬಿಡ್ರಿ ಇದೆಲ್ಲಾ.

ಶಿವೋತ್ತಮರು:– ನಮ್ಮಂಥವರದು ತಿಳಕೊಳ್ಳಿಕ್ಕೆ ನಿನಗ ಈ ಜನ್ಮ ಸಾಕಾಗೂದಿಲ್ಲ. ತಿಳೀತೇದು?

ಸೆಕ್ರೆಟರಿ:. ನೀವು ಹೇಳೂದು ಖರೇ ಅದsರೀ. ಈ ಯಾಕಂಪ್ರ ಧಂದೇಕ ನಾನು ಹೊಸಬ. ಸ್ವಲ್ಪ ದಿನಾ ತ್ರಾಸಾಗತೈತಿ.

ಶಿವೋತ್ತಮ:– ಅದಕ್ಕsಪಾ, ಲಗೂ ಲಗೂ ಎಲ್ಲಾ ತಿಳಕೊಳ್ಳೋ ಪ್ರಯತ್ನ ಮಾಡು

ಸೆಕ್ರೆಟರಿ:– ಮಾಡತೀನ್ರಿ.

ಶಿವೋತ್ತಮ:– ಏನ್ಮಾಡ್ತೀದಿ ನಿನ್ತಲೀ? ನೀ ಹಾಂಗ ಮಾಡಾಂವಾಗಿದ್ರ ಇಷ್ಟೊತ್ತಿನೊಳಗ ನನ್ನ ವ್ಯವಸ್ಥಾ ಮಾಡತಿದ್ದಿ?

ಸೆಕ್ರೆಟರಿ:– ಅದು ನೀವು ಹೇಳದ ನನಗ ಹ್ಯಾಂಗ ಗೊತ್ತಾಗಬೇಕ್ರೀ ರಾಯರ!

ಡಾಕ್ಟರ:– ಬಾಯಿಬಿಚ್ಚಿ ಹೇಳಾಕ ಇವರೇನು ಆ ವಕೀಲರ್ಹಾಂಗ ಚಿಲ್ಲರ ಮನುಷ್ಯರು ಅಂತ ತಿಳ್ದೀ ಏನು?

ಸೆಕ್ರೆಟರಿ:– ಅಲ್ರೀ ಡಾಕ್ಟರ! ಇಂಥಾ ವಿಷಯದಾಗ ರಾಯರು ಇಷ್ಟು ವಜನಕಟ್ಟು ಆದಾವರನ್ನೂದು ನನಗರಾ ಹ್ಯಾಂಗ ಗೊತ್ತಾಗಬೇಕ್ರೀ!

ಶಿವೋತ್ತಮ:– ಸೆಕ್ರೆಟರೀ ಆದಂವ್ಗ ಇವೆಲ್ಲಾ ಗೊತ್ತಿರಬೇಕಪಾ, ಕೆಲವು ಬಾಯಿಬಿಚ್ಚಿ ಹೇಳೋ ವಿಷಯ ಇರತಾವು. ಕೆಲವು ಸೂಕ್ಷ್ಮ ತಿಳ ಕೊಳ್ಳೂವು ಇರತಾವು.

ಸೆಕ್ರೆಟರಿ:– ಇನ್ನ ಗೊತ್ತಾಯಿತಲ್ರೀ. ನಿಮ್ಮ ವ್ಯವಸ್ಥಾ ಮಾಡೂದು ನನ್ನ ಕೂಡಿತು.

ಡಾಕ್ಟರ:– ನೋಡು, ರಾಯರಿಗೆ ನನಕಿಂತಾ ಹೆಚ್ಚು ವಯಸ್ಸಾಗಿದ್ದರೂ ರಸಿಕತನದೊಳಗ ನನಗಿಂತ ಮುಂದದಾರಿವರು.

ಶಿವೋತ್ತಮ:– ವಯಸ್ಸಿನೊಳಗ ನನಗೂ ನಿಮಗೂ ಅಷ್ಟೇನು ಫರಕಿಲ್ಲರೀ ಡಾಕ್ಟರ! ಭಾಳಾದರ ಎರಡು ಮೂರು ವರ್ಷ ಹೆಚ್ಚಿರಬೇಕು, ಅಷ್ಟ.

ಸೆಕ್ರೆಟರಿ:– ರಾಯರs ನಾನು ಸೆಕ್ರೆಟರಿ ಆಗಿ ಬಂದಮ್ಯಾಲ ಭಾಳ ಮಂದಿ ಮುಖಂಡರ್ನ ನೋಡಿದೆ. ಯಾರ್‍ಯಾರು ಹ್ಯಾಂಗ್ಹ್ಯಾಂಗ ಅನ್ನೂದನ್ನೂ ತಿಳಕೊಂಡೆ. ಇದೆಲ್ಲಾ ನೋಡಿ ನನಗೊಂದು ಥರಾ ವಿಚಿತ್ರ ಅನಸ ಲಿಕ್ಕೆ ಹತ್ತೇದ.

ಶಿವೋತ್ತಮ:– ನಿನಗೇನ ಅನಸ್ತತಡಪಾ ಅಂಥಾದು?

ಸೆಕ್ರೆಟರಿ:– ಅಂದರಿಷ್ಟ! ನಮ್ಮ ವಯಸ್ಸಾದ ಮುಖಂಡರಿಗೆ........ಬ್ಯಾಡ ಬಿಡ್ರಿ ಹೇಳ್ಲಿಕ್ಕೆ ಹೆದರಿಕೆ ಬರ್ತದ.

ಶಿವೋತ್ತಮ:– ಹೆದರಬ್ಯಾಡ ಹೇಳೋ. ನಾನು ಈಗ ಎಮ್ಮೆಲ್ಲೆ ಅಂತ ತಿಳ್ಕೋಬ್ಯಾಡ. ಶ್ರೀ ಶಿವೋತ್ತಮರಾಯರೂ ಅಂತ ತಿಳಕೊಂಡು ಹೇಳು.

ಡಾಕ್ಟರ:– ಹೌದು. ಹೀಂಗಿದ್ದಾಗ ನೀನು ಬೇಕಾದ್ದು ಹೇಳಬಹುದು ಆದರ ಸುರತು ಭಾಳ ಮಂದಿದ್ದಾಗ ಹೇಳಬ್ಯಾಡ ಆಯ್ತು.

ಶೆಕ್ರೆಟರಿ:– ಗೊತ್ತಾಯ್ತು ಬಿಡ್ರಿ. ಹಂಗಾದರ ಹೆದರಿಕಲ್ದ ಕೇಳಂತೀರ್ಯಾ?

ಶಿವೋತ್ತಮ:— ಹ್ಞೂ.

ಸೆಕ್ರೆಟರಿ:— ಅಲ್ರೀ, ವಯಸ್ಸಾದ ನಿಮ್ಮಂಥವರೆಲ್ಲಾ ಹರೇದ ಹುಡುಗೇರ ಬೇಕೂ ಅಂತೀರಲ್ಲಾ, ಯಾಕ?

ಶಿವೋತ್ತಮ:— ಇಷ್ಟಽಸೋ ಅಥವ ಇನ್ನೂ ಏನರಾ ಅದನೋ?

ಸೆಕ್ರೆಟರಿ:— ಇಷ್ಟಽರೀ!

ಶಿವೋತ್ತಮ:– ನಾವೆಲ್ಲಾ ಅಂಥವರಽ ಬೇಕೂಅಂತ ಹೇಳೂದಕ್ಕೂ ಒಂದು ಕಾರಣದಪಾ!

ಸೆಕ್ರೆಟರಿ:— ಅದ್ಯಾವದರೀ?

ಶಿವೋತ್ತಮ:– ನೋಡು, ನಾವೆಲ್ಲಾ ಹಿಂದ್ಕ ವಯಸ್ಸಿನೊಳಗಿದ್ದಾಗ ಸಿಕ್ಕರೆ ಶಿವಾ ಅಂತ ಹೊರಟಿದ್ವಿ ಮುಂದ ಬರಬರ್ತ ವಯಸ್ಸಾದ್ಹಾಂಗ ಅನುಭವ ಆತ್ನೋಡು, ಆಗ ವಿಚಾರಾ ಮಾಡಿ ಹೆಜ್ಜೀ ಇಡಬೇಕಾತು. ಅದಕ್ಕ ಈಗ ಹರೇದ ಹುಡಿಗೇರಽ ಬೇಕೂ ಅಂತ ಹೇಳ್ತೀವಿ. ಈಗರ ತಿಳೀತಿಲ್ಲೋ?

ಸೆಕ್ರೆಟರಿ:– ತಿಳೀದೇನು ಮಾಡೀತರೀ. ಅಂತೂ ನೀವು ತುಂಬಾ ಅನುಭವಸ್ಥರು ಬಿಡ್ರಿ.

ಶಿವೋತ್ತಮ:— ಅನುಭವ ಬೇಕಾಗತದಪಾ, ಭಾಷಣಾ ಮಾಡೂದಕ್ಕ ಹ್ಯಾಂಕ ಅಭ್ಯಾಸಬೇಕೋ ಹಾಂಗ, ಇದಕ್ಕೂ ಅನುಭವ ಬೇಕಾಗತದ.

ಸೆಕ್ರೆಟರಿ:— ಆಗಳೆ ನೀವು ಜಾತೀಯತೆ ಅಳೀಬೇಕೂ ಅಂತ ಎರಡು ತಾಸು ಭಾಷಣಾ ಮಾಡಿದಿರಲ್ಲ! ಖರೇಏಂಪ್ರ ಅಷ್ಟ ಅಭ್ಯಾಸಾ ಮಾಡೀರೇನ್ನೀವು?

ಡಾಕ್ಟರ:– ಎಷ್ಟ ಹುಚ್ಚ ಇದ್ದೀಯೋ ನೀನು? ಭಾಷಣಾ ಮಾಡ್ಯೋ ಮುಖಂಡರೆಲ್ಲಾ ಅಭ್ಯಾಸಾನ ಮಾಡಿರತಾರಂತ ತಿಳ್ದೀಏನು? ಇವರಿಗೆ ಬರದು ಕೊಡವರು ಬ್ಯಾರೇನ ಇರತಾರಪಾ, ಅವರು ಬರದದ್ದನ್ನ ಇವರು ಬಾಯಿಪಾಠಮಾಡಿ ಜನರ ಮುಂದ ಭಾಷಣಾ ಬಿಗದು ಚಪ್ಪಾಳಿ ಗಿಟ್ಟಿಸಿಗೊಂತಾರ.

ಸೆಕ್ರೆಟರಿ:- ಅಂತೂ ಇವರದೆಲ್ಲಾ ಭಾಡಿಗೀ ಧಂದೇನ ಆ ಧಂಗಾತಲ್ಲಾ !

ಡಾಕ್ಟರ:- ಅದರೊಳಗ ಸಂಶಯ ಅದ ಏನ್ನಿನಗ ?

ಸೆಕ್ರೆಟರಿ:— ಈಗ ಗೊತ್ತಾತು ಬಿಡ್ರಿ. ಇನ್ನೊಂದು ಮಾತು ಕೇಳ್ಲೇನ್ರಿ ರಾಯರ ?

ಶಿವೋತ್ತಮ:— ಕೇಳಲ್ಲಾ !

ಸೆಕ್ರೆಟರಿ:— ಒಬ್ಬೊಬ್ಬ ಭಾಷಣಕಾರರ್‍ರು ಒಂದೊಂದು ಕೆಲಸಾ ಸಾಧಸಾಕ ಭಾಷಣಾ ಮಾಡತಾರ ಹೌದಲ್ರೀ ?

ಶಿವೋತ್ತಮ:— ಅಂದ್ರ ?

ಸೆಕ್ರೆಟರಿ:— ಈಗ ನೋಡ್ರಿ. ಸೆರೆ ಕುಡೀಬಾರ್‍ದೂ ಅಂತಭಾಷಣಾ ಮಾಡವರು ತಾವs ಮೊದ್ಲ ಕುಡೀತಾರ, ಎಲ್ಲರೂ ನೀತಿವಂತರಾಗಿ ನಡೀಬೇಕೂ ಅಂತ ಹೇಳವರು ಹುಡಿಗೇರು ಬೇಕೂ ಅಂತಾರ. ಹೌದಲ್ರೀ ?

ಶಿವೋತ್ತಮ:- ಹೌದು. ಅದರೊಳಗೇನು ತಪ್ಪದ ?

ಸೆಕ್ರೆಟರಿ:— ತಪ್ಪಿಲ್ಲ ಬಿಡ್ರಿ ಅವರ್‍ದೂ ಉಪ್ಪುಂಡ ದೇಹ, ಅಂದಮ್ಯಾಲ ಎಲ್ಲಾ ಬೇಕಾಗ್ತದ. ಆದರ ನಿಮ್ಮದು ನನಗ ಗೊತ್ತಾಗಲಿಲ್ಲ.

ಶಿವೋತ್ತಮ:- ಅಂದ್ರ ?

ಸೆಕ್ರೆಟರಿ:- ಅಂದರಿಷ್ಟ ! ನೀವು ಹಗಲೆಲ್ಲಾ, ಜಾತೀಯತೆ ಅಳೀಬೇಕು, ನಾವೆಲ್ಲರೂ ಒಂದೇ ತಾಯಿಯ ಮಕ್ಕಳು, ಜಾತೀಯ ಭಾವನೆ ಇರಲೇ ಕೂಡದು, ನಮ್ಮದು ಜಾತ್ಯತೀತ ರಾಷ್ಟ್ರ, ಆದರ ಏಳ್ಗಿಗಾಗಿ ನಾವೆಲ್ಲ ಒಂದಾಗಿ ಶ್ರಮಿಸಬೇಕೂ ಅಂತ ಹೇಳ್ತೀರಿ.

ಶಿವೋತ್ತಮ:- ಹೌದು.

ಸೆಕ್ರೆಟರಿ:- ಇದರಿಂದ ನೀವೇನು ಸಾಧಿಸಿಗೊಂತೀರಿ ?

ಡಾಕ್ಟರ:- ಎಷ್ಟು ಹುಚ್ಚದೀದ್ಯೋ ನೀನು? ಎಲ್ಲಾರಕಿಂತಾ ಹೆಚ್ಚಿನ ಚಾನ್ಸು ಇವರಿಗೇ ಐತೋ !

ಸೆಕ್ರೆಟರಿ:— ಅಧ್ಯಾಂಗರೀ ?

ಡಾಕ್ಟರ:- ಇವರ ಜಾತ್ಯಾತೀತದ ಬಾಣಕ್ಕ ಎಲ್ಲಾ ಜಾತೀ ಮಾಲೂ ಬಿದ್ದು ಬಿಡ್ತಾವು.

ಸೆಕ್ರೆಟರಿ:— ಗೊತ್ತಾತು ಬಿಡ್ರಿ. ಅಂಥಾ ವಿಷಯದಾಗ ಇವರೂ ಜಾತೀಗೀತಿ ನೋಡ್ತಿರಲಿಕ್ಕಿಲ್ಲ. ಅಲ್ಲೇನ್ರೀ ರಾಯರ ?

ಶಿವೋತ್ತಮ:— ಇಂಥಾ ವಿಷಯದಾಗ ಜಾತಿ ನೋಡಿಕೊಂತ ಹೋದರ ಹ್ಯಾಂಗ ನಡೀತದs ಪಾ.

ಸೆಕ್ರೆಟರಿ:– ಹೌದು ಬಿಡಿರಿ. ಇಷ್ಟು ದೊಡ್ಡ ಮನಸ್ಸು ಮಾಡವರು ಈ ಕಾಲ ದೊಳಗ ಯಾರು ಸಿಗತಾರ್ರೀ !

ಡಾಕ್ಟರ:— ಇದ್ದರ ಸಿಗತಿದ್ರು.

ಸೆಕ್ರೆಟರಿ;– ಅದs ಅಂತೀನ್ರೀ ನಾನೂ.

ಶಿವೋತ್ತಮ;– ಹೋಗಲಿಬಿಡು, ಅದೆಲ್ಲಾ ಈಗ ಮತ್ತೇನು ಕೆಲಸದನಿಂದು ?

ಸೆಕ್ರೆಟರಿ;— ನನಗ ಕೇಳಿದಿರೇನು ?

ಶಿವೋತ್ತಮ:– ಹೌದು. ಮತ್ಯಾರಿಗೆ ಕೇಳಿದ್ನೆಂತ ತಿಳಿದಿದ್ದಿ ?

ಸೆಕ್ರೆಟರಿ:– ಡಾಕ್ಟರಿಗೆ ಅಂದ್ರೇನೋ ಅಂತ ಅಂದ್ಕೊಂಡಿದ್ದೆ. ಯಾಕಂದ್ರ ನಂದು ನಿಮ್ಮಂತೇಕ ಪ್ರೈವೇಟ್ ಕೆಲಸಿತ್ತು ಅದಕ್ಕ ಬಂದಿದ್ದೆ.

ಶಿವೋತ್ತಮ:– ಅದೇನಪಾ, ಅಂಥಾ ಕೆಲಸಾ ?

ಸೆಕ್ರೆಟರಿ:— ಅದು ಪ್ರೈವೇಟ್ ಅದsರೀ

ಶಿವೋತ್ತಮ:– ಅದೇನದ ಹೇಳಲ್ಲಾ !

ಸೆಕ್ರೆಟರಿ:— ನೀವು ಒಬ್ಬರs ಇದ್ರ ಛಲೋ ಆಗತಿತ್ತು.

ಶಿವೋತ್ತಮ:– ಡಾಕ್ಟರದಾರಂತ ಹೀಂಗ ಮಾಡ್ತೀಯೇನು ? ಅವರ ಬಗ್ಗೆ ಕಾಳಜೀ ಮಾಡಬ್ಯಾಡಾ. ಯಾಕಂದ್ರ ಅವರಿಗೆ ಅರಿಯದ್ದು ಯಾವುದೂ ಇಲ್ಲಾ.

ಸೆಕ್ರೆಟರಿ:– ಹಂಗಾದರ ಹೇಳೇಬಿಡೂ ಅಂತೀರ್ಯಾ ?

ಡಾಕ್ಟರ:— ಎಷ್ಟು ಹಿಂದ-ಮುಂದ ನೋಡತೀದ್ಯೋ ?

ಸೆಕ್ರೆಟರಿ:— ನೋಡಬೇಕಾಗತದರಿ, ಯಾಕಂದರ ವಿಷಯಾನ ಅಂಥಾದದ.

ಶಿವೋತ್ತಮ:— ಎಂಥಾದಿದ್ರೂ ನಡೀತದ ಹೇಳೋ !

ಸೆಕ್ರೆಟರಿ:– ಹಾಂಗಿದ್ರ ಕೇಳ್ರಿ. ನಿನ್ನೆ ಊರೊಳಗ ತಿರುಗ್ಯಾಡಿ ರಕ್ಷಣಾ ನಿಧೀಗಂತ ದುಡ್ಡು–ಬಂಗಾರಾ ಕೂಡಿಸಿದಿವೆಲ್ಲಾ ಅದರಾಗ....

ಶಿವೋತ್ತಮ:– ಅದರಾಗೇನು ?

ಸೆಕ್ರೆಟರಿ:– ಅಲ್ಲಾ, ಅದರಾಗ ನನಗೂ ಒಂದಿಷ್ಟು ಬಂಗಾರಾ ದುಡ್ಡು ಸಿಕ್ಕಿದ್ರ ಛಲೋ ಆಗ್ತಿತ್ತು.

ಶಿವೋತ್ತಮ:– ಏನಂದೀ ?

ಸೆಕ್ರೆಟರಿ:— ಯಾಕ ? ನಾ ಹೇಳಿದ್ದು ತಿಳೀಲಿಲ್ಲೇನ್ರಿ ?

ಶಿವೋತ್ತಮ;— ತಿಳೀತಪಾ. ಆದರ ಪಾಲು ಕೇಳೂವಷ್ಟು ಮುಂದೋರೆದೆಲ್ಲಾ ಅಂತ.

ಸೆಕ್ರೆಟರಿ:– ಯಾಕ್ರೀ ?

ಶಿವೋತ್ತಮ:– ಅಲ್ಲಾ, ಸ್ವಲ್ಪ ಸಲಿಗೀ ಕೊಟ್ಟು ಮಾತಾಡಿದರ ಇಲ್ಲೀತನಕಾ ಬಂದುಬಿಟ್ಟಿಲ್ಲ ?

ಸೆಕ್ರೆಟರಿ:—. ಅಲ್ರೀ ರಾಯರ ! ಪುಗಸೆಟ್ಟೆ ಯಾರೋ ಕೊಟ್ಟ ದುಡ್ಡಿನ್ಯಾಗ ನನಗೂ ಅಷ್ಟು ಕೊಡ್ರೀಅಂದ್ರ ಹೀಂಗ್ಮಾಡ್ತೀರಿ ಇನ್ನ ನಿಮ್ಮನೀಪ ಆಗಿದ್ರ ಒಂದು ಕರಿಬೇವಿನ ಕಡ್ಡೀನರಾ ಕೊಡತಿದ್ರ್ಯೊ ಇಲ್ಲೋ ?

ಡಾಕ್ಟರ:— ಯಾಕೋ, ನಾಲಿಗೀ ಭಾಳ ಸಡಲು ಬಿಟ್ಟೀ !

ಸೆಕ್ರೆಟರಿ:– ಅಲ್ರೀ, ನಿನ್ನೆ ನೀವೆಲ್ಲಾರೂ ಕೂಡಿ ಒಂಭತ್ತು ಸಾವಿರ ರೂಪಾಯಿ ಮತ್ತ ಎರಡು ನೂರು ತೊಲಿ ಭಂಗಾರಾನ ಎತ್ತಿ ಹಾಕದರಿ. ಅದರಾಗ ನನಗೂ ಸ್ವಲ್ಪ ಕೊಡಿರಿ ಅಂದ್ರ ಎಷ್ಟು ಸಿಟ್ಟು ಬಂತ್ರೀ ನಿಮಗ?

ಶಿವೋತ್ತಮ:– ಬರದೇನು ಮಾಡ್ತದ ? ಈಗಾಗಲೇ ನೀನು ನಮ್ಮ ಸಮಾನಂತ ತಿಳಕೋಂಢಂಗ ಕಾಣಸ್ತದ. ಅದಕ್ಕಂತs ಪಾಲು ಕೇಳ್ಲಿಕ್ಹತ್ತೀದಿ.

ಸೆಕ್ರೆಟರಿ; — ಅಲ್ರೀ. ಯಾರೂ ಮಾಡಲಾರದಂಥಾ ಕೆಲಸಾ ನನಕೂಡ ಮಾಡಸ್ತೀರಿ. ಇಂಥಾ ಹೊತ್ತಿನ್ಯಾಗ ಏನರಾ ಒಂದಿಷ್ಟು ಕೊಡ್ರಿ ಅಂತಂದ್ರ ಇಂಗುತಿಂದ ಮಂಗನ್ಹಾಂಗ ಮುಖಾ ಮಾಡತೀರಲ್ರೀ !

ಡಾಕ್ಟರ;– ಯಾಕೋ ! ತಲೀ ಸರಿ ಅದs ನೋ ಇಲ್ಲೋ ?

ಶಿವೋತ್ತಮ:— ಹೋಗಲಿ ಬಿಡ್ರಿ ಡಾಕ್ಟರ ! ಸುಮ್ನ ಅವನ ಬಾಯಿಗೆ ಯಾಕ ಹತ್ತೀರಿ ? ಪಾಪ. ಅವನೂ ಬಡವ. ಅಲ್ಲಪಾ. ನಿನಗ ಬೇಕಾಗಿ ರೂದರಾ ಏನು ?

ಸೆಕ್ರೆಟರಿ;- ಅಲ್ರೀ, ಮಗಳ ಮದುವಿತ್ತು. ಈಗ ಕಯ್ಯಾಗ ದುಡ್ಡು ಹಿಡಕೊಂಢೋದರ ಬಂಗಾರ ಸಿಗೂದಿಲ್ಲಾ ಅಂಥಾದರಾಗ ನಮ್ಮಂಥ ಬರಿಗೈಯವರಿಗೆ ಎಲ್ಲಿ ಸಿಗಬೇಕು ? ಅದಕs ಒಂದಿಷ್ಟು ಬಂಗಾರಾ ಮತ್ತ ರೂಪಾಯಿ ಸಿಕ್ಕಿದ್ರ ಛಲೋ ಇತ್ತು.

ಶಿವೋತ್ತಮ:— ಭಂಗಾರ್ದ್ಯಾಕ ಸಿಗೂದಿಲ್ಲೋ ? ಬೇಕಾದಷ್ಟು ಸಿಗತೈತಿ ಆದರ ಹಣಾ ಇರಬೇಕು ನೋಡು.

ಸೆಕ್ರೆಟರಿ:— ಬಂಗಾರದಂಗಡೀಯವರು ಮುಂದೀ ಮಾರೀ ನೋಡಿ ಬಂಗಾರಾ ಕೊಡ್ತಾರಾ. ನಮ್ಮಂಥಾ ಖಾದೀಧಾರಿಗಳನ್ನ ಕಂಡರ ಮುಗದ್ಯ ಹೋತು. ಇಲ್ಲಂತ ಬಾಗಲಾನ ಮುಚ್ಚಿ ಬಿಡಕಾರ.

ಶಿವೋತ್ತಮ:- ಇರ್ಲಿ ಬಿಡಪಾ. ಒಂದೈದು ತೊಲಿ ಬಂಗಾರಾ ಮತ್ತ ಒಂದೊಂದೈ ದಾರ್ನೂರು ರೂಪಾಯಿ ಕೊಟ್ರ ಸಾಕು ಹೌದಲ್ಲೊ ?

ಸೆಕ್ರೆಟರಿ:- ಅಷ್ಟಾದರ ಸಾಕು ಬಿಡ್ರಿ.

ಶಿವೋತ್ತಮ:- ಹಾಂಗಿದ್ರ ನಾಳೆ ಸಂಜೀಮುಂದ ಅವರ ವ್ಯವಸ್ಥಾ ಮಾಡತೀನಿ. ಯಾಕಂದ್ರ ಅದಿನ್ನೂ ಒಬ್ರುಹಂತೇಕ ಹಂಗs ಇಟ್ಟೇವಿ. ಯಾರೂ ಹಂಚಿಗೊಂಡಿಲ್ಲ.

ಸೆಕ್ರೆಟರಿ:- ಹಂಗs ಆಗಲ್ರೀ, ನಾಳೆ ಸಂಜೀಮುಂದ ಕೊಡ್ರಿ ಆದರದು ಅಷ್ಟೇನವಸರಿಲ್ಲ. ಮಗಳ ಮದುವಿನ್ನೂ ಮುಂದಿನ ತಿಂಗಳದಾಗೈತಿ.

ಶಿವೋತ್ತಮ : ಇನ್ನರಾ ನಿನ್ನ ಕೆಲಸ ಮುಗಿಯಿತಲ್ಲಾ ?

ಸೆಕ್ರೆಟರಿ;- ಹೂನ್ರೀ

ಶಿವೋತ್ತಮ :- ಹಾಂಗಿದ್ರ ಹೋಗಿ ಬಿಡು ಇನ್ನ ನಮಗೆ ಬ್ಯಾರೇ ಕೆಲಸ ಪಾವು

ಸೆಕ್ರೆಟರಿ :— ಆಗಲ್ರೀ ಬರ್ತೀನಿನ್ನ ಆವರೆ ನಾಳೆ ಸಂಜೀಮುಂದ ಮರೀ ಬ್ಯಾಡ್ರೀ ಆತು.

ಶಿವೋತ್ತಮ :— ಮರಿಯೂದಿಲ್ಲ ಹೋಗಪಾ ನಾವೇನು ಸಮ್ಮನೀ ಗಂಟು ಕೊಡೂದು ಅಷ್ಟರೊಳಗs ಅದ.

ಸೆಕ್ರೆಟರಿ;—ನಾನೂ ಪುಗಶೆಟ್ಟೇದೂ ಅಂತ ಕೇಳ್ತೀನ್ರಿ. ನಿಮ್ಮಸಿದಾಗಿದ್ರ ನಾ ನರಾ ಯಾಕ ಕೇಳ್ತಿದ್ದೆ- ಒಳ್ಳೇದು ಬರ್ತೀನಿ ನಮಸ್ಕಾರ.

(ಎಂದು ಅವರೀರ್ವರಿಗೂ ನಮಸ್ಕರಿಸಿ ಹೋಗುವನು )

ಡಾಕ್ಟರ : (ಸೆಕ್ರೆಟರಿ ದೂರ ಹೋಗುವದನ್ನು ಗಮನಿಸಿ ) ಅಂತೂ ಇವನೂ ಪಕ್ಕಾ ಆದಾನ ಯಾಕ್ರೀ ರಾಯರ ?

ಶಿವೋತ್ತಮ : ಇರದೇನ ಮಾಡ್ತಾನ ಮೊದ್ಲ ನಾವ ತಪ್ಪ ಕೆಲಸ ಮಾಡ್ತೇವಿ.

ಡಾಕ್ಟರ :-- ಏನು ?

ಶಿವೋತ್ತಮ ; ಇಂಥವರಿಗೆ ಸಲಿಗೀ ಕೊಡ್ತೀವಲ್ಲಾ. ಅದು ದೊಡ್ಡ ತಪ್ಪು !

ಡಾಕ್ಟರ:-- ಹೌದು ಇಂಥವರನ್ನು ಎಲ್ಲಿಡಬೇಕೋ ಅಲ್ಲೇ ಇಡಬೇಕು. ಅದನ್ನ ಬಿಟ್ಟು ನೀವು ಭಾಳ ಸಲಿಗೀ ಕೊಡ್ತೀರಿ.

ಶಿವೋತ್ತಮ :-- ಹೋಗಲಿ ಬಿಡು ಮುಂದೇನ್ಮಾಡೋದು ?

ಡಾಕ್ಟರ: ಹ್ಯಾಂಗ ಮಾಡ್ಲೀ ? ನೀವು ಬಾ ಅಂದರ ಬರ್ತೀನಿ ? ಬ್ಯಾಡಾ ಅಂದರ ಬಿಡ್ತೀನಿ.

ಶಿವೋತ್ತಮ : ನೀವು ಬರೂದು ಬ್ಯಾಡಾಂತ ಅನಸ್ತದ. ಯಾಕಂದ್ರ ನಿಮಗೂ ಮತ್ತು ಈಶ್ವರರಾಯರ ಹೆಂಡತಿಗೂ ಸ್ವಲ್ಪ ಬಿಗಡಾಸೇದ ಅಂತ ಕೇಳೀನಿ.

ಡಾಕ್ಟರ;--ನಿಮ್ಮುಂದ ಯಾರು ಹೇಳಿದರು ? ಅರುಂಧತೀನ ಹೇಳಿದಳೇನು ?

ಶಿವೋತ್ತಮ; ಆಕೆಲ್ಲಾ. ಆಕೀಗಂತ ಹೇಳಿದ. ಅಲ್ದ ಇವತ್ತ ಮನೀಗೆ ಬರ್ಲಿಕ್ಕೆ ಅವಸರ ಹೇಳ್ಯಾನ.

ಡಾಕ್ಟರ;-- ಹೋಗಿ ಬರ್ರಿ ಅದರ ಆಕಿ ನಿಮಗ ದಕ್ಕತಾಳಂತ ನನಗೇನ್ನೂ ಅನಸೂದಿಲ್ಲ

ಶಿವೋತ್ತಮ ;-- ನಾನು ನಿಮ್ಹಾಂಗ ಅವಸರಾ ಮಾಡೂದಿಲ್ಲರೀ ಡಾಕ್ಟರ ! ಎಲ್ಲಿ ಹ್ಯಾಂಗ ನಡಕೋಬೇಕನ್ನೂದು ನನಗ ಗೊತ್ತದ.

ಡಾಕ್ಟರ;-- ಏನೋ ನೋಡ್ರಪಾ ದೇವರು ನಿಮಗ ಯಶಾ ಕೊಡ್ಲಿ.

ಶಿವೋತ್ತಮ ; ಅದೇನು, ಒಮ್ಮೆಗೇ ಎಷ್ಟು ದೊಡ್ಡ ಮನಸ್ಸು ಮಾಡಿದಿರಲ್ಲಾ

ಡಾಕ್ಟರ ;-- ಮಾಡಬೇಕಾಗದತರೀ, ಅದು ನಿಮಗ ದಕ್ಕದರ ಮುಂದೆಂದರಾ ಒಮ್ಮೆ ಸಂಬಧೂ ಹತ್ತ ಬಹುದೂಂತ.

ಶಿವೋತ್ತಮ:-- ಅಡ್ಡಿಯಿಲ್ಲ ನೀವೂ ಭಾಳ ದೂರದ್ದ ವಿಚಾರ ಮಾಡತೀರಿ ಅಂದಗಾತು.

ಡಾಕ್ಟರ;-- ಮಾಡಬೇಕಾಗತದರೀ, ಅದಿರ್ಲಿ ಬಿಡ್ರಿ ನಾನು ಬರ್ತೇನಿನ್ನ ನಮಸ್ಕಾರಾ ( ಹೋಗುವನು. )

ಶಿವೋತ್ತಮ; ಹೋಗಿ ಬರ್ರೀ ನಮಸ್ಕಾರಾ (ಎಂದು ಅವನು ಹೋದ ದಿಕ್ಕಿನ ಕಡೆಗೆ ನಮಸ್ಕಾರ ಮಾಡಿ ) ನಾವೂ ಹೊರಡೂಣಿನ್ನ.

# ದೃಶ್ಯ ೧೦ ಈಶ್ವರರಾಯರ ಮನೆ.

ಗಂಗೂಬಾಯಿ, ಸುವರ್ಣಾ ಹಾಗು ಅರುಂಧತಿಯರು ಬೇರೆ ಬೇರೆ ಕಡೆಗೆ ಮುಖಮಾಡಿಕೊಂಡು ನಿಂತಿದ್ದಾರೆ. ಈಶ್ವರರಾಯನು ಅತ್ತಿಂದಿತ್ತ ಇತ್ತಿಂದತ್ತ ತಿರುಗಾಡುತ್ತಿದ್ದಾನೆ. ಮುಖದ ಮೇಲೆ ಸಿಟ್ಟಿನ ಕಳೆಯಿದೆ. ತಿರುಗಾಡುತ್ತಿದ್ದಂತೆ ತಟಕ್ಕನೆ ನಿಂತು.—

**ಈಶ್ವರರಾಯ** — ಗಂಗೂs

**ಗಂಗೂಬಾಯಿ**— ಯಾಕಣ್ಣಾ !

**ಈಶ್ವರರಾಯ:**— ನಿಮ್ಮಗಳು ಭಾಳ ದೊಡ್ಡಕ್ಯಾಗಿ ಬಿಟ್ಟಾಳ. ಕಂಡವರ ಮಾತು ಕೇಳಿ ಮನೀಗೆ ಬಂದವರಿಗೆ ಬಾಯಿಗೆ ಬಂಧಂಗ ಅನ್ನೂದು ಕಡಿಮಿ ಮಾಡಂತ ಹೇಳು.

**ಗಂಗೂಬಾಯಿ** :— ನೀನು ಹೇಳಿದರ ನಾನೇನು ಬ್ಯಾಡಂತೀನೇನಣ್ಣಾ? ನಾ ಯಾಕ್ಹೇಳಬೇಕು.

**ಈಶ್ವರರಾಯ**:– ಆ ಮ್ಯಾಲ ನಾನು ಹೇಳೂದು ಅದ. ಇವತ್ತು ನಾನೂ ಎರಡರಾಗ ಒಂದು ಆಗಲಿಕ್ಕೇ ಬೇಕೂ ಅಂತ ನಿರ್ಧಾರ ಮಾಡೀನಿ

**ಅರುಂಧತಿ:**— ನಾನೂ ನಿರ್ಧಾರ ಮಾಡೀನಿ. ಏನಾಗೂದು ಇವತ್ತ ಆಗೇಬಿಡ್ಲಿ.

**ಈಶ್ವರರಾಯ** :- ಅದನ್ನ ನೋಡಬೇಕಾಗೇದ ಇವತ್ತು.

**ಅರುಂಧತಿ** ;—ನೋಡಿಲ್ಲಾ ಯಾರು ಬ್ಯಾಡಂತಾರ?

**ಗಂಗೂಬಾಯಿ**:— ಎದುರುತ್ತರಾ ಕೊಡಬ್ಯಾಡs ನೀನು.

**ಅರುಂಧತಿ**:- ನಿನ ಅಣ್ಣಾ ಏನಂದ್ರೂ ಅನಿಸಿಕೊಂಡು ಸುಮ್ಮನ ಇರು ಅಂತಿಯೇನು ?

**ಈಶ್ವರ**:– ಸುಮ್ನು ಯಾಕಿರ್ತೀದಿ? ಬಾಯಿಗೆ ಬಂದದ್ದನ್ನ ಬೊಗಳಿ ಬಿಡಲ್ಲಾ?

**ಅರುಂಧತಿ**:– ಹೌದು ಮತ್ತ ! ನೀ ಮಾಡೂ ಕೆಲಸ ಎಂಥಾವೂ ಅನ್ನೂದನ್ನ ಒಂದಸಲಾನರಾ ಕುಂತು ವಿಚಾರಾ ಮಾಡಿಏನು ?

**ಈಶ್ವರ**:– ವಿಚಾರ ಮಾಡದಾ ಯಾವ ಕೆಲಸಾನೂ ಮಾಡೂದಿಲ್ಲ ನಾನು

**ಅರುಂಧತಿ**:– ಹೂಹೂ ! ನೀನೇನು ಮನುಷ್ಯನೋ ಅಥವಾ ಪಶುನೋ ಅನ್ನೂದ ನನಗ ತಿಳೀವಲ್ದು.

ಈಶ್ವರಃ– ಗಂಗೂ ! ಕೇಳಿದೇನವಾ ನಿನ್ಮಗಳ ಮಾತ್ನ.

ಗಂಗೂಬಾಯಿಃ– ಅರುಂಧತಿ ! ನೀನು ಬಾಯಿ ಮುಚಿಗೊಂಡು ಸುಮ್ನ ಇರ್ತೀಯೋ ಇಲ್ಲೋ ?

ಅರುಂಧತಿಃ– ಅವ್ವಾ ! ನೀನು ಎಷ್ಟು ಕಷ್ಟದಾಗದೀದನ್ನೂದ ನನಗ ಗೊತ್ತದ. ಯಾಕಂದ್ರ ನಿನಗ ಅಣ್ಣನ ಸಲುವಾಗೀನೂ ವಿಚಾರ ಮಾಡಬೇಕಾಗತದ, ಇತ್ಲಾಗ ನನ್ನ ಕಾಳಜೀನೂ ಮಾಡಬೇಕಾಗತದ ಹೀಂಗ ನೀನು ಧರ್ಮಸಂಕಟದಾಗ ಸಿಕ್ಕೊಂಡೀದಿ. ಆದರ ನಿನ್ನ ಸಲುವಾಗಿ ನಾನು ನಿನ್ನ ಅಣ್ಣ ಹೇಳಿಧಂಗ ಕೇಳಾಕ ತಯಾರಿಲ್ಲ. ಇದೂ ಖಂಡಿತವಾದ ಮಾತು.

ಗಂಗೂಬಾಯಿಃ– ಹಡಪ ತಾಯಿಗೆ ಇಂಥಾ ಉತ್ತರಾ ಕೊಡಾಕ ನಿನಗ ನಾಚಿಗಿ ಬರೂದಿಲ್ಲೇನು ?

ಅರುಂಧತಿಃ– ನಾಚಿಗಿ ಯಾತಕ್ಕ ಬರತದ ? ಇದs ಮಾತು ನಾನು ನಿಮ್ಮೆಲ್ಲಾರಿಗೂ ಕೇಳಿದರ ಏನುತ್ತರಾ ಕೊಡ್ತೀರಿ ?

ಗಂಗೂಬಾಯಿಃ– ಅಂದರ ?

ಅರುಂಧತಿಃ— ಅಂದರೇನು ? ನಿನ್ನಣ್ಣ ಹೇಳಿಧಂಗ ಕೇಳಿದರ ನಿನಗ ಸಂತೋಷಾಗ್ತದ ಏನು ?

ಗಂಗೂಬಾಯಿಃ- ಗಂಡನ ಮಾತು ಕೇಳೂದು ಹೆಂಡತಿಯ ಧರ್ಮ ಹೌದಲ್ಲೋ ?

ಅರುಂಧತಿ:— ಗಂಡ ಹೆಂಡತಿ ಅನ್ನೂದನ್ನ ಬಿಟ್ಟು ಹೇಳವಾ. ನಿಮಣ್ಣ ಹೇಳಿಧಂಗ ಕೇಳಿದರ ನಿನಗ ಸಂತೋಷವಾಗತೈತಿ ಹೌದಲ್ಲೋ ?

ಗಂಗೂಬಾಯಿ:– ಹೀಂಗ ಕೇಳಿದರ ನಾನು ಏನ ಹೇಳಬೇಕವಾ. ಇನ್ನ ಮ್ಯಾಲ ನಾನು ನಿಮ್ಮ ಜಗಳದಾಗ ಬರೂದs ಇಲ್ಲ. ಏನ ಬೇಕಾದ್ದು ಮಾಡಿಕೊಳ್ರಿ.

ಅರುಂಧತಿ:— ಅಷ್ಟಂದು ಸುಮ್ನಾಗಿ ಬಿಡು.

ಈಶ್ವರರಾಯ:— ಹೇಳ್ತಾಳ ನೋಡು. ಸುಮ್ನಾಗಿ ಬಿಡು ನೀನು,

ಗಂಗೂಬಾಯಿ:— ಮತ್ತೇನು ಮಾಡ್ಲೆಣ್ಣಾ ಇದರಾಗ ನನಗೇನೂ ತಿಳಿಧಾಂಗ ಗೇದ,

**ಈಶ್ವರರಾಯ:**— ಅರ್ಧಾಂಗ ತಿಳಿದೀತವಾ? ನೀವು ತಾಯಿ—ಮಕ್ಕಳಿಗೆ ನಾ ಹೇಳಿದ್ದು ತಿಳಿಯೂದs ಇಲ್ಲ. ಏ ಸುವರ್ಣಾ ನೀ ಏನಂದಿ ?

**ಸುವರ್ಣಾ:**— ಯಾವುದು ಯಾರ್‍ಲಾ ?

**ಈಶ್ವರ:**— ನಿನ್ನೆ ಹೇಳಿದ್ದು ಮರೆತ ಬಿಟ್ಟೇನು ? ನೀನು ನನ್ನ ತಮ್ಮನ ಕೂಡ ಮದುವೆ ಮಾಡಿಕೋ ಬೇಕು.

**ಸುವರ್ಣಾ:**— ನಾ ಈಗ ಮದ್ವಿ ಒಲ್ಲೆ ಮಾಮಾ.

**ಈಶ್ವರ**— ಈಗ ಒಲ್ಲೆಂತ ಹೇಳಿ ಯಾವನ ಕೂಡರಾ ಹೋಗಿ ಬಿಟ್ರೆ ಏನ್ಮಾಡೂದು ?

**ಸುವರ್ಣಾ**— ನಾನು ಹಾಂಗ ಕಾಣಸ್ತೀನೇನು ಮಾಮಾ ?

**ಈಶ್ವರ:**— ನೀ ಹ್ಯಾಂಗ ಕಾಣಸ್ತೀ ಅನ್ನೂದು ನನಗ ಬೇಕಾಗಿಲ್ಲ ನನ್ನ ತಮ್ಮನ ಕೂಡ ಮದ್ವಿ ಮಾಡಿಕೋ ಅನ್ನೂದೊಂದು ನನಗ ಗೊತ್ತು

**ಸುವರ್ಣಾ**— ಅದು ನನ್ನಕಡಿಂದಾ ಸಾಧ್ಯವಿಲ್ಲ ಮಾಮಾ !

**ಈಶ್ವರ:**—ಯಾಕ ?

**ಸುವರ್ಣಾ**—ಯಾಕಂತ ಕೇಳ್ತೀರಿಯಲ್ಲಾ ಈಗವನ ಮದುವಿ ಆಗಿಲ್ಲೇನು ? ಅಲ್ಲದ ಅವರಿಗೊಂದು ಹುಡುಗೀನೂ ಐತಿ.

**ಈಶ್ವರ:**—ಇದ್ರೇನಾತು ?

**ಅರುಂಧತಿ:**— ಯಾಕ ಹೇಳಬಾರ್‍ದು ? ನನ್ನ ತಂಗೀ ಬಗ್ಗೆ ನಾ ಹೇಳದ ಇನ್ಯಾರು ಹೇಳ್ತಾರ.

**ಈಶ್ವರ:**— ಶಿವೋತ್ತಮರಾಯರು ಬರುವತನಕ ನೀ ಮಾತಾಡಬ್ಯಾಡ, ಅವರು ಬಂದ ಮ್ಯಾಲ ಮಾತಾಡುವಂತಿ.

**ಅರುಂಧತಿ:**— ಮತ್ಯಾವ ಶಿವೋತ್ತಮರಾಯರವರು ?

**ಈಶ್ವರ:**— ಮತ್ಯಾರು ? ಆಗಲ್ಲೆ ಭಾಷಣ ಕೇಳಾಕ ಹೋಗಿದ್ದೇವಲ್ಲಾ ಅವರs.

**ಅರುಂಧತಿ:**— ಅವರ್‍ಯಾಕ ಬರ್‍ತಾರಿಲ್ಲೆ ?

**ಈಶ್ವರ:**— ಕೆಲಸದs ಅಂತ ಬರ್‍ತಾರ.

**ಅರುಂಧತಿ:**— ಬರೇ ಇಂಥವರ್‍ನ ಕರ್‍ಕೊಂಡು ಬಾ ನೀನು? ಇವರು ಯಾವ

ಯಾವ ನೌಕರೀ ಕೊಡತ್ತಾರಂತ?

**ಈಶ್ವರ:**– ಇವರು ನೌಕರೀ ಕೊಡಸಾಕ ಬರೂದಿಲ್ಲಾ. ನಿನಗ ಬುದ್ಧೀ ಹೇಳಾಕ ಬರತ್ತಾರ

**ಅರುಂಧತಿ:**– ಯಾಕ, ನೌಕರೀ ಕೊಡಾಕ ಬರವ್ರು ಕಡಿಮೆ ಆದರೇನು?

**ಈಶ್ವರ:**– ಬಂದವರಿಗೆಲ್ಲಾ ನೀನು ಬಾಯಿಗೆ ಬಂಧಂಗ ಅಂದುಕೊಂತ ಹೋದರ ಬರತ್ತಾರ್ಯಾರು?

**ಅರುಂಧತಿ:**– ಆ ನಿನ್ನ ಪೇಪರ ಆಫೀಸಿನವರು ನಿನಗಂತ ನೌಕರೀ ಕೊಡಬೇಕಾಗಿತ್ತಲ್ಲಾ?

**ಈಶ್ವರ:**– ಯಾಕ?

**ಅರುಂಧತಿ;**– ಯಾಕಂತ ಕೇಳಾಕ ನಾಚಿಗಿ ಬರೂದಿಲ್ಲೇನು? ಆ ನಿನ್ನ ಪೇಪರಿನವರು ತಮ್ಮ ಜಾತೀ ಮರ್ಯಾದೀ ಉಳಸಾಕ ಏನೇನ ಮಾಡಿದರನ್ನೂದು ಇಷ್ಟು ಲಗೂನ ಮರತಬಿಟ್ಟೇನು?

**ಈಶ್ವರ:**– ಆ ಸುದ್ದೀ ತಗೀಬ್ಯಾಡಂತ ನಿನಗ ಎಷ್ಟು ಸಲ ಹೇಳಬೇಕು?

**ಸುವರ್ಣಾ:**– ಹೋಗಲಿ ಬಿಡಕ್ಕಾ, ನಮಗೇನೂ ಕೆಡಗಾಲಾನ ಬಂದsದ ಆದಕ್ಯಾರೇನು ಮಾಡಬೇಕು?

**ಅರುಂಧತಿ:**– ಸುಮ್ಮ, ನಾವು ಬಾಯಿಮುಚಿಗೊಂಡು ಕುಂತ್ರ ನಡೆಯೂದಿಲ್ಲಾ. ಈಗ ಸುಮ್ನಿದ್ರ ನನ್ನ ಬಾಳೇವು ಹಾಳುಮಾಡಿಧಂಗ ನಿಂದೂ ಹಾಳು ಮಾಡಿಬಿಡತಾರ

**ಸುವರ್ಣಾ:**– ಹೌದಕ್ಕ. ಹ್ಯಾಂಗರಾ ಮಾಡಿ ನನ್ನ ಇದರಾಗಿಂದ ಪಾರು ಮಾಡವಾ

**ಅರುಂಧತಿ:**– ನೀ ಏನ ಹೆದರಬ್ಯಾಡಾ ಹಿಂದೂ ಕೋಡ್‌ಬಿಲ್ ಪ್ರಕಾರಾ ಎರಡು ಮದುವೀ ಮಾಡಿಕೊಳ್ಳಾಕ ಬರೂದಿಲ್ಲಾ. ಅಂಥಾ ಪ್ರಸಂಗ ಬಂದ್ರ ನೋಡೂಣಂತ.

**ಈಶ್ವರ:**– ನನಗ್ಯ ಕಾಯ್ದೆ ಕಲಿಸಲಿಕ್ಕೆ ಹತ್ತೀದೇನು. ಈಕೀದು ಆ ಮ್ಯಾಲ ನೋಡೂಣಂತ.

**ಅರುಂಧತಿ:**– ನೋಡೂಣಲ್ಲಾ!

**ಈಶ್ವರ:**– ಗಂಗೂs! ಶಿವೋತ್ತಮ ರಾಯರು ಬರೋ ಹೊತ್ತಾತು. ನೀನು ಸುವರ್ಣಾನ್ನ ಕರಕೊಂಡು ಅಡಗೀಮನಿಯೊಳಗ್ಹೋಗಿ ಕುಂತಗೋ.

ಈಶ್ವರ ರಾಯನ ಆಜ್ಞೆಯ ಪ್ರಕಾರ ಗಂಗೂಬಾಯಿ ತನ್ನ ಕಿರಿಯ ಮಗಳು ಸುವರ್ಣಳೊಂದಿಗೆ ಅಡುಗೆಮನೆಯೊಳಗೆ ಹೋಗುವಳು. ಅದೇ ಸಮಯಕ್ಕೆ ಶಿವೋತ್ತಮ ರಾಯರು ಬಂದು—

**ಶಿವೋತ್ತಮ**:– ಈಶ್ವರರಾಯರು ಮನೆಯೊಳಗಿದ್ದಾರೇನ್ರಿ?

ಈಶ್ವರ:– ಬರ್ರೀ ರಾಯರ. ನಮಸ್ಕಾರಾ, ಒಳಗ ಬರ್ರೀ. ಅರುಂಧತಿ! ಖುರ್ಚಿ ಸ್ವಲ್ಪ ಸರಿಯಾಗಿಡು.

ಶಿವೋತ್ತಮ:– ಪರವಿಲ್ಲ. (ಎಂದು ನುಡಿದು ಖುರ್ಚಿಯ ಮೇಲೆ ಕುಳಿತುಕೊಂಡು) ಏನಪಾ ತಂಗೀ! ಆರಾಮಿದ್ದೀಯಾ?

ಅರುಂಧತಿ:– ಇನ್ನೂ ಸತ್ತಿಲ್ರೀ!

ಈಶ್ವರ:– ಒಂದಿಷ್ಟು ಛಂದಾಗಿ ಮಾತಾಡಲಾ!

**ಶಿವೋತ್ತಮ**:– ಇರ್ಲಿ ಬಿಡ್ರಿ ಈಶ್ವರ ರಾಯರs!

ಈಶ್ವರ:– ಹಾಂಗಲ್ರೀ! ಯಾರ ಜೋಡೀಲೆ ಹ್ಯಾಂಗ ಮಾತಾಡಬೇಕನ್ನೂದು ಗೊತ್ತಿರಬಾರದೇನ್ರೀ?

ಶಿವೋತ್ತಮ:– ಈ ವಯಸ್ಸಿನ್ಯಾಗ ಗೊತಾಗೂದಿಲ್ರೀ ರಾಯರ! ನಮ್ಮಂಥವರು ಗೊತ್ತು ಮಾಡಿಕೊಡಬೇಕು. ಅಷ್ಟ!

ಈಶ್ವರರಾಯ:– ಏನ ಮಾಡ್ತೀರೊ ಮಾಡ್ರಿ. ಹ್ಯಾಂಗರಾ ಮಾಡಿ ನಮ್ಮನಿತನದ ಮರ್ಯಾದಿ ಉಳಿಯೂ ಹಾಂಗ ಮಾಡಿರಿ, ಸಾಕು.

**ಶಿವೋತ್ತಮ**:– ಅದು ನನಗ ಕೂಡೇದರೀ ರಾಯರ! ಆ ಬಗ್ಗೆ ನೀವು ಕಾಳಜೀ ಮಾಡಬ್ಯಾಡ್ರಿ.

ಈಶ್ವರ:— ನೀವು ಹೇಳಿದ ಮ್ಯಾಲ ನಾ ಯಾಕ ಕಾಳಜಿ ಮಾಡಲಿ ರಾಯರ!

ಶಿವೋತ್ತಮ:– ಅಷ್ಟಂದು ಸುಮ್ನಿದ್ದು ಬಿಡ್ರಿ, ಅಲ್ಲವಾ ತಂಗಿ ನಿನ್ನ ವಿಷಯ ಏನು?

ಅರುಂಧತಿ – ನಂದೇನದರೀ?

ಶಿವೋತ್ತಮ:– ನಿಂದದs ಅಂತ ನಾನು ಇಲ್ಲೀತನಕಾ ಬರಬೇಕಾತವಾ. ಇರದಿದ್ರ ನಾಯಾತಕ್ಕ ಬರ್ತಿದ್ದೆ?

ಅರುಂಧತಿ:– ಅಂಥಾದೇನದsರೀ?

ಶಿವೋತ್ತಮ:- ಅದೇನೋ ನೀನು ಆ ಕಾದಂಬರಿಕಾರನ್ನ ಇನ್ನೂ ಮರ ತಿಲ್ಲಂತಲ್ಲವಾ ?

ಅರುಂಧತಿ:- ನೀವೀಗ ಅವರ ವಿಷಯಾನ ಮಾತಾಡಾಕ ಬಂದಿರೇನು ?

ಶಿವೋತ್ತಮ:— ಹೌದವಾ, ಜಾತೀದೊಂದು ಪ್ರಶ್ನದ ನೋಡು. ಅವನ ಜಾತಿ ಯಾವುದು ? ನಿನ್ನ ಜಾತಿ ಯಾವುದು ?

ಅರುಂಧತಿ:— ನೀವೂ ಜಾತಿ ಭೇದ ಎಣಿಸ್ತೀರ್ಯಾ ?

ಶಿವೋತ್ತಮ:— ಯಾಕ ? ನಾನು ಜಾತಿ ಭೇದಾ ಎಣಿಸಬಾರದೇನು ?

ಅರುಂಧತಿ:- ಹೌದು.

ಶಿವೋತ್ತಮ:- ಯಾಕ ?

ಅರುಂಧತಿ:- ಜಾತಿ ಭೇದ ಎಣಿಸಬಾರದೂ ಅಂತ ನೀವು ತಾಸುಗಟ್ಲೆ ಭಾಷಣಾ ಮಾಡತೀರಲ್ರೀ !

ಶಿವೋತ್ತಮ:— ಭಾಷಣಾ ಮಾಡಿದರೇನಾತು ? ಅದು ಬ್ಯಾರೇ ಜ್ಯಾತೀ ಯವರ ಸಲುವಾಗಿ ಹೇಳಬೇಕಾಗತದ.

ಅರುಂಧತಿ:— ಅದು ನಿಮ್ಮ ಜಾತಿಯವರಿಗೆ ಲಾಗೂ ಆಗೂದಿಲ್ಲ ಕಾಣಸ್ತದ.

ಶಿವೋತ್ತಮ:- ಹೌದು,

ಅರುಂಧತಿ:— ಅಡ್ಡೀ ಇಲ್ಲಾ. ನೀವು ಹೇಳೂದs ಬ್ಯಾರೆ, ನಡಿಯೂದ ಬ್ಯಾರೇ. ಅಂಥಂಗಾತಲ್ಲಾ.

ಶಿವೋತ್ತಮ:- ಹೌದು.

ಅರುಂಧತಿ:- ಜನತೆಯ ಪ್ರತಿನಿಧಿಗಳಲ್ರೀ ನೀವು ! ನಿಮ್ಮಂಥವರs ಆಡಿಧಾಂಗ ನಡೀದಿದ್ರ ಮತ್ಯಾರು ನಡೀಬೇಕು.

ಶಿವೋತ್ತಮ:- ಅಂಥಂಗ ನಡೀದಾ ಇರೂದs ಮುಖಂಡರ ಲಕ್ಷಣ; ಹಾಂಗ ನಾವು ಆಡಿಧಂಗ ನಡಕೋತ ಹೋದರ ಮುಗಧೋತು. ಆ ಮ್ಯಾಲ ನಮ್ಮನ್ಯಾರು ಕೇಳ್ತಾರ ?

ಅರುಂಧತಿ:- ಅಂದ್ರ ? ಆಡಿಧಂಗ ನಡಕೊಂಡ್ರ ನಿಮ್ಮನ್ಯಾರೂ ಕೇಳೂದ ಇಲ್ಲೇನು ?

ಶಿವೋತ್ತಮ:— ಹೌದು. ನಾವು ಆಡಿಧಂಗ ಇನ್ನೊಬ್ಬರು ನಡೀಬೇಕs ಹೊರ್ತು ನಾವು ನಡೀಬಾರ್ದು

ಅರುಂಧತಿ:– ಅಂದ್ರ? ಎಲ್ಲಾ ಮುಖಂಡರೂ ನಿಮ್ಮ ವಿಚಾರದವರ ಅದಾರೇನ್ರಿ?

ಶಿವೋತ್ತಮ:– ಬಹುತೇಕ ನಮ್ಮಂಥವರ ಭಾಳ ಮಂದೆದಾರ. ಎಲ್ಲಾರೂ ಅಂಥವರ ಅದೀವೆಂತ ನಮ್ದು ನಡೀತದ. ಒಳ್ಳೇಯವರು ಅಂದ್ರ ನಮ್ಮನ್ಯಾರು ಕೇಳಬೇಕು?

ಅರುಂಧತಿ:– ಅದ್ಕೇ ಇಲ್ಲಾ ನಿಮ್ಮಂಥಾ ಮುಖಂಡರನ್ನ ಪಡದ ಈ ಕರ್ನಾಟಕ ಉದ್ಧಾರಾಧಂಗಾತು.

ಶಿವೋತ್ತಮ:— ಹುಚ್ಚಿ! ಕರ್ನಾಟಕ ಉದ್ಧಾರಾದರೆಷ್ಟು, ಬಿಟ್ಟರೆಷ್ಟು! ನಾವು ಆರಾಮಾಗಿದ್ರ ಸಾಕು. ಊಂಗುಪಕಾರಾ ಮಾಡಬಾರ್ದು. ಹೆಣಕ್ಕ ಸಿಂಗಾರಾ ಮಾಡಬಾರದೂ ಅಂದ ಹಿರೇರ ಹೇಳ್ಯಾರಂದ ಮ್ಯಾಲ ಅವರ ಮಾತು ನಡಸದಿದ್ರ ಹ್ಯಾಂಗಾಗತದ?

ಅರುಂಧತಿ:– ಅಲ್ರೀ! ಮತ್ತ ಅದ್ಕ ಹಿರೇರು ಜನತಾ ಸೇವೆಯೇ ಜನಾರ್ದನ ಸೇವೆ ಅಂತ ಹೇಳ್ಯಾರಲ್ಲಾ?

ಶಿವೋತ್ತಮ:– ನೋಡವಾ, ಹಿರೇರ ಮಾತಿನೊಳಗೂ ನಮಗ ಅನುಕೂಲ ಆಗೂವಂಥಾವ್ನ ನಡೆಸಬೇಕು. ಎಲ್ಲಾನೂ ನಾವ್ಕ ನಡಸಬೇಕೂ ಅಂದ್ರ ಹ್ಯಾಂಗ ಸಾಧ್ಯದ ನೋಡು. ನಮಗ ಬೇಕಾದ್ದನ್ನ ನಾವು ನಡಸ್ತೇವಿ. ಉಳಿದದ್ದನ್ನ ಬ್ಯಾರೇಯವರು ನಡಸಲೆಲ್ಲಾ!

ಅರುಂಧತಿ:– ಅದ್ಕೇ ಇಲ್ಲಾ. ನೀವು ನಡೀರನ್ನೂದನ್ನ ಒಪಿಗೊಳ್ಳುವಷ್ಟ ದೊಡ್ಡ ಗುಣಾನರಾ ಅದ್ಕ ಅಲ್ಲ. ಅಷ್ಟಕ್ಕರ ಸಂತೋಷ ಪಡಬೇಕು.

ಶಿವೋತ್ತಮ:– ಎಲ್ಲಾರೆದುರಿಗೂ ಹಿಂಗS ಮಾತಾಡತೀವಿ ಅಂತ ತಿಳ್ಧೀ ಏನ್ನೀನು?

ಅರುಂಧತಿ:– ಹೌದು.

ಶಿವೋತ್ತಮ:–ಅದಕ್ಕ ನಿನಗ ಜಗತ್ತಿನ ಅನುಭವ ಇಲ್ಲಿಸ್ನೂದು. ಹಿಂಗಾಗೇ ನೀನು ಯಾರ್ಯಾರ ಮ್ಯಾಲೋ ಮನಸ್ಸಿಟಗೊಂಡು ಕುಂತೀದಿ.

ಅರುಂಧತಿ:– ನೋಡ್ರಿ. ಆಡೂದೊಂದು. ಮಾಡೂದೊಂದು ಮಾಡ್ಲಿಕ್ಕೆ ನಾ ನಿಮ್ಮಷ್ಟು ದೊಡ್ಡಾಕೆಲ್ಲ. ಅಲ್ದ ದೇವರು ನನಗ ಅಂಥಾ ಗುಣಾನ ಕೊಡೂದೂ ಬ್ಯಾಡಾ. ಇನ್ನೇನದ?

ಶಿವೋತ್ತಮ;- ಹಾಂಗಲ್ಲವಾ! ಈ ಸ್ವಾರ್ಥೀ ಜಗತ್ತಿನೊಳಗೆ ಸರಿಯಾಗಿ ಬದಕಬೇಕಾದರ ಹೀಂಗೆಲ್ಲಾ ಮಾಡಬೇಕಾಗತದ, ನಿನಗಿನ್ನು ಜಗತ್ತಿನ ಅನುಭವ ಇಲ್ಲ. ಅದಕ್ಕs ಹೀಂಗ್ಮಾತಾಡ್ತಿ'ದಿ.

ಅರುಂಧತಿ:— ನಿಮ್ಮಂಥಾ ಅನುಭವ ನನಗ ಯೋಳ್ಯೋಳ ಜನ್ಮಕೂ ಬರೂದು ಬ್ಯಾಡ್ರಿ. ಈಗ ನಾನು ಹ್ಯಾಂಗದೀನಿ, ಹಾಂಗ ಸಾಯೂ ತನಕಾ ಇದ್ರ ಸಾಕು.

ಈಶ್ವರ:— ಹಿರಿಯರು ಹೇಳಾಕ ಬಂದಿರೂವಾಗ ಹೀಂಗ ಮಾತಿಗೆ ಮಾತ್ಯ ಮಾಡಸಬಾರದು ಅರುಂಧತಿ!

ಅರುಂಧತಿ:— ಮತ್ತೇನ ಮಾಡಬೇಕು?

ಈಶ್ವರ:- ಅವರು ಹೇಳಿದ್ದನ್ನ ಕುಂತು ಕೇಳಬೇಕು. ಮತ್ತ ಅದಹ್ಯಾಂಗ ನಡೀಬೇಕು.

ಅರುಂಧತಿ:- ಇವರ್ಹೇಳಿಧಂಗ ಕೇಳಬೇಕತೀರಿಯಾ?

ಈಶ್ವರ;- ಹೌದು.

ಅರುಂಧತಿ:— ಹಾಂಗಿದ್ರ ನನಗ ವಿದ್ಯಾ ಯಾಕ ಕಲಿಸಿದಿ?

ಈಶ್ವರ:- ಅಂದ್ರ? ವಿದ್ಯಾಕಲ್ತ ಮಾತ್ರಕ್ಕ ಹಿರೇರ ಮಾತು ಕೇಳಬಾರದೂ ಅಂತದ ಏನು?

ಅರುಂಧತಿ:- ಹಾಂಗಲ್ಲ. ವಿದ್ಯಾ ಕಲಿಯೂದರಿಂದ ಯಾವ ಮಾತು ಕೇಳಬೇಕು, ಯಾವನ್ನ ಕೇಳಬಾರದೂ ಅನ್ನೋ ವಿವೇಚನಾ ಶಕ್ತಿ ಬರ್ತದ.

ಶಿವೋತ್ತಮ:- ಹಾಂಗಿದ್ರ ನಾ ಹೇಳಿದ್ದನ್ನ ಕೇಳಬಾರದೂ ಅಂತ ನಿನ್ನ ವಿವೇಚನಾ ಶಕ್ತಿ ಹೇಳ್ತದ ಏನವಾ?

ಅರುಂಧತಿ:— ಅದನ್ನ ನನ್ನ ಬಾಯಿಲೇ ಕೇಳಬೇಕಂತೀರೇನು? ನಿಮ್ಮ ಆತ್ಮಕ್ಕ ಕೇಳಿದರ ಅದs ಉತ್ತರಾ ಕೊಟ್ಟೇತೂ ಅಂತ ನನಗನ್ಸ್ತದ.

ಈಶ್ವರ:- ಮಾತಿಗೆ ಮಾತು ಉತ್ತರಾ ಕೊಡೂದನ್ನ ನೀನು ಒಳ್ಳೇ ಮಾತೀಲೇ ಬಿಡೂ ಹಾಂಗ ಕಾಣೂದಿಲ್ಲಾ, ಅಲ್ಲ?

ಅರುಂಧತಿ:— ನಾ ನಿನಗ ಎಷ್ಟು ಸಲ ಹೇಳಬೇಕು?

ಈಶ್ವರ:— ಹಾಂಗಿದ್ರ ಇವತ್ತ ನೀನು ನಡಾ ಮುರಿಯೂ ಹಾಂಗ ಬಡಿಸಿ ಗೊಂತೀದೀ ಆತು.

ಶಿವೋತ್ತಮ:- ಶಾಂತ ಆಗರೀ ರಾಯರs. ಒಮ್ಮಿಗೇ ಸಿಟ್ಟಿನ ಕಯ್ಯಾಗ ಬುದ್ಧೀ ಕೊಡಬಾರದರೀ.

ಅರುಂಧತಿ: — ದೇವರು ಇವಗ ಇನ್ನೇನು ಕೊಡದಿದ್ರೂ ಸಿಟ್ಟೊಂದು ಕೊಟ್ಟಾ ನ್ನೋಡ್ರಿ.

ಈಶ್ವರ:— ಛಲೋ ಮಾತೀಲೆ ಬಾಯಿ ಮುಚ್ತೀಯೋ ಇಲ್ಲೋ?

ಶಿವೋತ್ತಮ:— ರಾಯರ! ನೀವು ಸುಮ್ನ ಇರ್ತೀರಿಲ್ರೀ? ನೀವು ಹೀಂಗ ಮಾಡಬೇಕಾಗಿದ್ರ ನಮ್ಮನ್ಯಾತಕ್ಕ ಕರಿಸಿದಿರಿ ಮತ್ತ? ಹೊಡಿ ಯೂದು ಬಡಿಯೂದು ಮಾಡಿ ನೀವs ಮುಗಿಸ ಕೊ: ಬೇಕಾಗಿತ್ತು.

ಈಶ್ವರ:—ಹಾಂಗಲ್ರಿ !

ಶಿವೋತ್ತಮ;—ಮತ್ಹ್ಯಾಂಗ ?

ಈಶ್ವರ: —ಅಲ್ರೀ, ಈ ಅನಿಷ್ಟ ಮುಂಡೆ ನಿಮ್ಮಂಥವರಿಗೆ ತಿರುಗುತ್ತರಾ ಕೊಡತ್ತ್ತೆಲ್ಲ ಈಕೀಬೆಸ್ಸಿದ್ದೀತು ಸೊಕ್ಕು ?

ಶಿವೋತ್ತಮ—ಅಕೀ ಮಾತು ಮನಸ್ಸಿಗೆ ಹಚಿಕೊಂಡ್ರ ಹ್ಯಾಂಗ ನಡಿದೀತ್ರಿ? ನಾ ಹೇಳಿಧಂಗ ನೀವರ ಕೇಳ್ತೀರೇನು; ಮುಂದಿಂದು ನಾ ನೋಡಿಕೊಂ ತೀನಿ ?

ಈಶ್ವರ:- ನಾ ನಿಮ್ಮಾತು ಕೇಳೋದಿಲ್ರೀ ?

ಶಿವೋತ್ತಮ;- ಹಾಂಗಿದ್ರ ಈಗ ನೀವು ಸುಮ್ನ ಸ್ವಲ್ಪ ಹೊತ್ತು ಹೊರ ಗ್ಹೋಗ್ರಿ. ಯಾಕಂದರ ನಿಮ್ತುಲೀ ಸರೀ ಇಲ್ಲಾ.

ಈಶ್ವರ:— ಆನಲ್ರಿ ಹಂಗಾದರ ( ಎಂದು ಹೋಗತೊಡಗುವನು. )

ಅರುಂಧತಿ:—ಅಡ್ಡೀ ಇಲ್ಲಾ ಒಬ್ಬ್ಕೀನs ಬಿಟ್ಟು ಹೊರಗ್ಹೋಗಾಕ ಅಕಲು ಛಲೋ ತೆಗೆದೀದೆಲ್ಲಾ ?

ಈಶ್ವರ:— ನೋಡಿದಿರ್ಯಾ? ನೀವು ಯಾತಕ್ಕ ಹೊರಗೆಹ್ಹೋಗಂದ್ರಿ, ಆದರಈಕಿ ತಿಳಕೊಂಡಿರೂದ ಬ್ಯಾರೆ.

ಶಿವೋತ್ತಮ;— ಯಾಕವಾ, ನಿನಗ ನನ್ನ ಮ್ಯಾಲೂ ಭರವಸೆ ಇಲ್ಲೇನು?

ಅರುಂಧತಿ:—ನನಗ ನಸ್ಮಾಲೇ ಭರವಸೆ ಯಿಲ್ಲಧಂಗಾಗೇದಂದ ಮ್ಯಾಲ ಎರ ಡನೇಯವರ ಬಗ್ಗೆ ಏನ್ಹೇಳ್ಲಿ ?

ಶಿವೋತ್ತಮ:– ಹೌದವಾ ! ಸಧ್ಯಕ್ಕ ನಿನ್ನ ಪರಿಸ್ಥಿತೀನ ಹಾಂಗದ. ಅದಕ್ಯಾರೇನು ಮಾಡಬೇಕು ? ಆದರೂ ನೀ ಏನ ಹೆದರಬ್ಯಾಡವಾ ಈಶ್ವರರಾಯರು ಹೊರಗ್ಹೋದರೂ ಮನೆಯೊಳಗ ನಿನ್ನಾಯಿ ತಂಗಿ ಇಬ್ರೂ ಆದಾರ ತಿಳೀತಿಲ್ಲೊ

ಅರುಂಧತಿ:– ಹಾಂಗೇನಿಲ್ರಿ ಬಂದದ್ದನ್ನ ಎದುರಿಸೋ ಧೈರ್ಯ ಇನ್ನೂ ನನ್ನಲ್ಲಿದ. ಅದಕಲ್ಲ ನಾ ಹೇಳಿದ್ದು ?

ಶಿವೋತ್ತಮ:– ಮತ್ಯಾವದಕ್ಕವಾ ?

ಅರುಂಧತಿ:– ಒಬ್ಬಾಕೇನ ಬಿಟ್ಟು ಹೊರಗ್ಹೋಗಾಕ ಮತ್ತೊಂದು ಹೊಸಾ ಟ್ರಿಕ್ ತಗದಸಲ್ಲಾ ಅಂತ

ಶಿವೋತ್ತಮ:– ಹಾಂಗೇನಿಲ್ಲವಾ ! ಅವರಿಗೆ ಸ್ವಲ್ಪ ಸಿಟ್ಟು ಬಂತಾಳ. ಅದರ ಸಲುವಾಗಿ ಸ್ವಲ್ಪ ಹೊರಗ ಹೋಗರೀ ಅಂತ ನಾನs ಹೇಳಲಿಲ್ಲೇನು ?

ಅರುಂಧತಿ: ಅವ್ನ ಹೊರಗರ ಹೋಗ್ಲಿ ಇಲ್ಲೇ ಅರಾ ಇರ್ಲಿ. ಎಲ್ಲಿದ್ದರೂ ನನ್ಪಾಲಿಗೆ ಅಷ್ಟs ಐತಿ. ಅದರ ಸುಮ್ ಸುಮ್ನ ಸಿಟ್ಟಿಗೇಳೂದು ನನಗ ಸೇರಿಕಿಲ್ಲ.

ಶಿವೋತ್ತಮ:— ಹೌದವಾ, ಮಾಡಿಕೊಂಡ ಹೆಂಡ್ತಿ ಹೀಂಗ ಮಾತಾಡಿದರ ಯಾವ ಗಂಡಗ ಸಿಟ್ಟು ಬರ್ಲಿಕ್ಕಿಲ್ಲ ?

ಅರುಂಧತಿ:– ಗಂಡಸಾಗಿ ಸಿಟ್ಟಿಗೆದ್ರ ನಾನೆಲ್ಲಿ ಬ್ಯಾಡಾ ಅಂತೀನ್ರೀ ! ಇವಂದು ಗಂಡಸಿನ ಸಿಟ್ಟಲ್ಲ. ತಲಿಹಿಡಕನ ಸಿಟ್ಟು.

ಈಶ್ವರ:– ಇವತ್ತು ನಿನಗ ತುಂಬಿಬಂಧಂಗ ಕಾಣತ್ತದ.

ಅರುಂಧತಿ:— ನೀನು ಇವತ್ತಿನ ಸುದ್ದೀ ಹೇಳ್ತೀದಿ. ಖರೇ ಹೇಳಬೇಕಂದ್ರ ನಂದು ನಿನ್ನ ಕೈಲಿ ತಾಳೀ ಕಟ್ಟಿಸಿಗೊಂಡ ದಿವಸಾನ ಮುಗಧೋಗ್ಯೈತಿ.

ಈಶ್ವರ:– ನೀನು ಒಳ್ಳೇ ಮಾತೀಲೆ ಸುಮ್ನ ಇರೂಹಾಂಗ ಕಾಣ್ಸೂದಿಲ್ಲಾ ಅಲ್ಲs ?

ಅರುಂಧತಿ:— ನೀ ಸುಮ್ನ ಇದ್ರ ನಾನೂ ಸುಮ್ನ ಇರ್ತೀನಿ.

ಈಶ್ವರ:— ಇಷ್ಟೊತ್ತನತನಾ ನಾನು ಗಪ್ಪಿರಲಿಲ್ಲೇನು ?

ಅರುಂಧತಿ:— ಹಾಂಗಿದ್ರ ನಡುವೆ ಬಾಯಿ ಯಾಕ್ ಹಾಕಿದಿ ?

ಈಶ್ವರ:— ನೀ ಏನಂದ್ರೂ ಅನಿಸಿಗೊಂಡು ಸುಮ್ನ ಇರಬೇಕೇನು ?

ಅರುಂಧತಿ:— ನಾನೇನಂದೆ ?

**ಈಶ್ವರ:**– ರಾಯರಿಗೆ ಬಾಯಿಗೆ ಬಂಥಾಂಗ ಉತ್ತರಾ ಕೊಡಲಿಲ್ಲೇನು ?

**ಅರುಂಧತಿ:**– ಬಾಯಿಗೆ ಬಂಥಂಗ ಉತ್ತರಾ ಕೊಡಲಿಲ್ಲಾ. ಅವರು ಕೇಳಿದ್ದಕ್ಕ ಉತ್ತರ ಕೊಟ್ಟೆ. ಅಷ್ಟ

**ಶಿವೋತ್ತಮ:**– ಹೋಗಲಿ ಬಿಡ್ರಿ ಈಶ್ವರರಾಯರ. (ಅರುಂಧತಿಗೆ) ತಂಗೀ ! ನೀನರ ಸ್ವಲ್ಪ ಶಾಂತ ಆಗವಾ !

**ಅರುಂಧತಿ:**– ಬಂದಾಗಿನಿಂದ ನೀವs ನೋಡಾಕ್ಹತ್ತೀರಲ್ರೀ ! ನಾನೇನು ಆಡ ಬಾರದ್ದನ್ನ ಆಡೀನಿ.

**ಶಿವೋತ್ತಮ:**– ನೀ ಹೇಳೂದು ಖರೇ ಅದsವಾ. ಆದರೂ ಗಂಡಸಿಗೆ ಸಿಟ್ಟು ಬರೂದು ಸ್ವಾಭಾವಿಕ.

**ಅರುಂಧತಿ:**— ಗಂಡಸಿಗೆ ಸಿಟ್ಟು ಬರೂದಕ್ಕ ನಾನರೆ ಎಲ್ಲಿ ಬ್ಯಾಡಂತೀನ್ರೀ ? ಆದರ ಇವನಿಗ್ಯಾಕ ಬರಬೇಕೂ ಅಂತ !

**ಶಿವೋತ್ತಮ:**– ಅಂದ್ರ ?

**ಅರುಂಧತಿ:**– ಅಂದ್ರೇನ್ರಿ ? ಇವ ಗಂಡೂ ಅಲ್ಲ, ಹೆಣ್ಣೂ ಅಲ್ಲ. ಅಂದ್ಮ್ಯಾಲೆ ಸಿಟ್ಯಾಕಬರಬೇಕು ?

**ಈಶ್ವರ**–– ಹಲಕಟ್ ರಂಡೆ (ಎಂದು ನುಡಿದು ಅರುಂಧತಿಗೆ ಹೊಡೆಯು ಹೋಗುವನು. ಶಿವೋತ್ತಮರಾಯರು ಅವನನ್ನು ತಡೆದು )

**ಶಿವೋತ್ತಮ**–– ಈಶ್ವರರಾಯರ ! ನೀವು ಹಿಂಗೆಲ್ಲಾ ಮಾಡಿದರ ನಾನs ಹೋಗಿ ಬಿಡತೀನಿ. ನಾ ಹೋದ ಮ್ಯಾಲ ಏನ ಬೇಕಾದ್ದಮಾಡಿಕೊಳ್ರಿ ನಾ ಇದ್ದಾಗ ಮಾತ್ರ ಇಂಥಾದೆಲ್ಲಾ ಮಾಡಬ್ಯಾಡ್ರಿ.

**ಈಶ್ವರ**–– ಆತರಿ. ಅಕಿ ಏನರ ಅನಮ್ಯಾಕ ನಾ ಸುಮ್ಮನ ಇದ್ದು ಬಿಡ ತೀನಿ

**ಶಿವೋತ್ತಮ**— ಹ್ಞ ! ಇದು ಬುದ್ಧಿವಂತರಾಡೋ ಮಾತರೆಪಾ ಹ್ಞಾ. ನಿಂದೇನವಾ ತಂಗೀ !

ಅರುಂಧತಿ– ನಂದೇನದsರೀ

ಶಿವೋತ್ತಮ—ಅದನವಾ ನೀನು ಹಿಂದಿನದೆಲ್ಲಾ ಮರತುಬಿಡವಾ

ಅರುಂಧತಿ– ನೋಡ್ರಿ. ನೀವು ಆ ಸುದ್ದೀ ತಗೀದಿದ್ದರs ಛಲೋ ಆಗ್ತದಂತ ಅನಸ್ತದ.

ಶಿವೋತ್ತಮ-ಹಾಂಗಂದರ್ಹ್ಯಾಂಗವಾ ?

ಅರುಂಧತಿ—ಮತ್ತೇನ ಮಾಡಬೇಕಂತೀರಿ ನೀವು ?

ಶಿವೋತ್ತಮ;—ನೋಡವಾ ನಾ ಏನs ಹೇಳಿದರೂ ಎಲ್ಲರಿಗೂ ಛಲೋ ಆಗೂ ಪನ್ನ ಹೇಳ್ತೇನಿ.ಆದರ ನೀನು ನಾನು ಹೇಳಿದ್ಮ್ಯಾತು ಕೇಳ್ತೇನಿಅಂತಂಪ್ರ ಹೇಳ್ತೇನಿ ಇರದಿದ್ರ ಬಂದದಾರಿಗೆ ಸುಂಕಿಲ್ಲಾಂತ ತಿಳಿದು ಹೋಗಿ ಬಿಡ ತೀನಿ.

ಅರುಂಧತಿ—ಆ ವಿಷಯು ತಗಿಯೂದಾದರ ನೀವು ಹೇಳೂದs ಬ್ಯಾಡಂತಿದ್ದೆ. ಆದರೂ ಮನೀ ತನಕ ಬಂದವರಿಗೆ ಹಾಂಗ ಹೇಳೂದು ಸರೀ ಅನಸ್ಲೂ ದುಲ್ಲ ಅಂತ ಸುಮ್ಮನಿರಬೇಕಾಗೇದ.

ಶಿವೋತ್ತಮ-ಅಯ್ಯು. ಮನೀ ತನಕ ಬಂದದ್ದಕ್ಕ ಅಷ್ಟುರಮಯರ್ಾದಿಕೊಟ್ಟಿ ಲ್ಲವಾ,ಅಷ್ಟ ಸಾಕು. ಇನ್ನೇನು ಬಂದೀವಿ ಅಂದದ್ದಕ್ಕ ಸುಮ್ನ ಹೋಗ ಬಾರ್ದೂ ಅಂತ ಒಂದೆರಡು ಬುದ್ದೀ ಮಾತು ಹೇಳ್ತೇನಿ. ಕೇಳೋಮನ ಸ್ಸಿದ್ರ ಕೇಳು ಇರದಿದ್ರ ಬಿಟ್ಟು ಬಿಡು.

ಅರುಂಧತಿ— ಹಾಂಗಂದರ್ಹ್ಯಾಂಗ್ರೀ ? ನೀವು ಹೇಳೋ ಮಾತು ಕೇಳೋ ಹಾಂಗಿದ್ರ ಅವಶ್ಯ ಕೇಳ್ತೇನಿ.ಒಳ್ಳೇ ಮಾತಿಗೂ ಎದುರುತ್ತರಾ ಕೊಡೂ ವಷ್ಟು ಅಧಿಕ ಪ್ರಸಂಗಿ ಅಲ್ಲ್ಯಾನು.

ಶಿವೋತ್ತಮ;- ಅದು ನನಗ ತಿಳೀತದವಾ ಹಾಂಗಂತ ನಾನೂ ಇಲ್ಲೀತನಕಾ ಬರ್ಲಿಕ್ಕೆ ಒಪಿಗೊಂಡದ್ದು ಇರದಿದ್ರ ಬರ್ಲಿಕ್ಕೆ ನನಗೇನು ಹುಚ್ಚು ಹಿಡಿದದ ಏನು ?

ಅರುಂಧತಿ:— ಆಯ್ತು ಹೇಳ್ರಿ ಹಂಗಾದರ !

ಶಿವೋತ್ತಮ:— ಆದರೊಳಗ ಹಗಲೆಲ್ಲಾ ಹೇಳೋದs ಏನದವಾ? ಯಾರು ಏನ ಹೇಳಿದರೂ ಅದs ವಿಷಯಾನ ಬರೂದು; ಅಂದ್ಮ್ಯಾಲ ನಾವs ಬಾಯಿಬಿಟ್ಟು ಹೇಳೂದಕಿಂತಾ ನೀನs ತಿಳಕೊಂಡು ನಡದರ ಒಳ್ಳೇದಾಗತದ.

ಅರುಂಧತಿ:— ಅದು ನನಗೂ ತಿಳೀತದs೦ ಆದಗ ನನಗೇನು ಮಾಡಂತೀರಿ?

ಶಿವೋತ್ತಮ:— ಮತ್ತೇನು ಮಾಡೂದು? ಹಿಂದಿಂದೆಲ್ಲಾ ಮರತು ಎಲ್ಲಾ ಶಿ ದರೂ ನೌಕರಿ ಮಾಡಿಕೋತ ಸುಖದಿಂದ ಇದ್ದುಬಿಡು. ಏನವಾ !

ವಕೀಲ:- ಓಹೋ! ನೀನು ಕಾಂಗ್ರೆಸ್ ಆಫೀಸಿನ ಸೆಕ್ರೆಟರಿ ಅಲ್ಲs ಅಂದ ! ನ್ಯಾಲ ನಿನಗ ರಾಷ್ಟ್ರದ ಕಳಕಳೀ ಇರೋದು ಸ್ವಾಭಾವಿಕ. ಈಗ ಹೊಸತಾಗಿ ಮತ್ಯಾವ ಕಳಕಳೀ ಪ್ರಾರಂಭಾಗೇದ?

ಸೆಕ್ರೆಟರಿ:- ಅಂದ್ರ? ನಮಗ ಕಳಕಳೀನ ಇಲ್ಲಂತ ತಿಳ್ದೀರೇನು?

ಚಂದ್ರಶೇಖರ:- ನಿನಗಿರದಿದ್ರ ಇನ್ಯಾರಿಗಿರಬೇಕಪಾ?

ಸೆಕ್ರೆಟರಿ:- ನೋಡಪಾ ಚಂದ್ರಶೇಖರ! ನೀನಿನ್ನೂ ಸಣ್ಣ ಹುಡುಗ, ಸ್ವಲ್ಪ ಸರಿಯಾಗಿ ಮಾತಾಡೂದು ಕಲೀಪಾ!

ಚಂದ್ರಶೇಖರ:- ನನಗ ಬುದ್ಧೀ ಕಲಸಾಕ ಬರಬ್ಯಾಡಪಾ, ನಿನ್ನ ಕೆಲ್ಸ ನೀನು ಮಾಡಿಕೊಂಢೋದರ ಸಾಕು

ವಕೀಲ:- ಈ ಹುಡುಗನ ಮಾತು ಮನಸ್ಸಿಗೆ ಹಚಿಗೋಬ್ಯಾಡಪಾ! ನಿನ ಗೇನ ಹೇಳಬೇಕಾಗೇದ, ಅದನ್ಹೇಳು.

ಸೆಕ್ರೆಟರಿ:- ನನಗೇನ್ಹೇಳ ಬೇಕಾಗೇದರೀ!

ವಕೀಲ:- ಅಲ್ಲೋ, ಅದೇನೋ ನಾಟಕ ಕಂಪ್ನಿ ಮಾಲೀಕರು, ರಾಷ್ಟ್ರದ ಕಾರ್ಯ ಅಂತ ಏನೇನೋ ಹೇಳಿದೆಲ್ಲೋ?

ಸೆಕ್ರೆಟರಿ:- ಹ್ಞಾ! ಅವರ ಸಲುವಾಗೇ ನಿಮ್ಮನ್ನ ಭೆಟ್ಟಿಯಾದೆ. ಆದರ ಈ ಹುಡುಗನ ಮಾತು ನನ್ನ ಗೊಂದಲದೊಳಗ ಕೆಡವಿಬಿಟ್ಟಿತು.

ವಕೀಲ:- ಆಯ್ತಿಲ್ಲ! ಈಗರೆ ಹೇಳು. ಏನದು?

ಸೆಕ್ರೆಟರಿ – ಮತ್ತೇನಿಲ್ರೀ! ನಿಮಗ ನಾಟಕ ಕಂಪ್ನಿ ಮಾಲೀಕರದೆಲ್ಲಾ ಗುರ್ತದ. ಅವರೆಲ್ಲಾರಿಗೂ ನನ್ನ ಪರಿಚಯ ಮಾಡಿಸಿಕೊಡ್ತೀರ್ಯಾ

ವಕೀಲ:- ಯಾಕಪಾ! ನಿನ್ನ ಕೆಲಸಕ್ಕ ನಾಟಕದೊಳಗಿನ ನಟಿಯರ್ನ ಉಪಯೋಗ ಮಾಡಿಕೋಬೇಕಂತ ಮಾಡೀಯೇನು?

ಸೆಕ್ರೆಟರಿ:- ನನ್ನ ಕೆಲಸಕ್ಕ! ಅಂದ್ರ?

ವಕೀಲ:- ಅಂದ್ರೇನೋ? ನಮ್ಮಂಥವರಿಗೆ ಹೊತ್ತು ಬಿದ್ದಾಗ ಸಪ್ಲಾಯ ಮಾಡಲಿಕ್ಕೆ!

ಸೆಕ್ರೆಟರಿ:- ಛೇ, ಛೇ, ಛೇ, ಹಾಂಗಲ್ರೀ ವಕೀಲರ, ಆ ಕೆಲ್ಸಕ್ಕ ಅಲ್ರೀ, ನಾನು ಕೇಳಿದ್ದು ಬ್ಯಾರೇ ಕೆಲಸಕ್ಕ.

ಚಂದ್ರಶೇಖರ:- ಅದಕ್ಕಿರದಿದ್ರ ಮತ್ತ್ಯಾಕಪಾ?

**ಸೆಕ್ರೆಟರಿ:**– ತಮ್ಮಾ! ದೊಡ್ಡವರು ಮಾತಾಡೋ ವ..ಂದ ಹುಡುಗರು ಸುಮ್ಮನಿರಬೇಕಪಾ!

**ವಕೀಲ:**– ಚಂದ್ರೂ! ನೀನು ಸ್ವಲ್ಪ ಸುಮ್ನಿರಪಾ!

**ಚಂದ್ರಶೇಖರ:**– ಆಗಲಿ ವಕೀಲರೇ!

**ವಕೀಲ:**– ಹೇಳಪಾ, ಮತ್ಯಾವ ಮಹತ್ಕಾರ್ಯಕ್ಕ ಅವರ ಪರಿಚಯ ಮಾಡಿಸಿ ಕೊಡಬೇಕಪಾ?

**ಸೆಕ್ರೆಟರಿ:**– ಅದs ಹೇಳಿನ್ನೆಲ್ರೀ, ರಾಷ್ಟ್ರದ ಕಾರ್ಯಕ್ಕಾಗೇ ಅವರ ಪರಿಚಯ ಮಾಡಿಕೋ ಬೇಕಾಗೇದ.

**ವಕೀಲ:**– ಅದ್ಯಾವದಪಾ ರಾಷ್ಟ್ರದ ಕಾರ್ಯ?

**ಸೆಕ್ರೆಟರಿ:**– ಏನ್ರೀ ವಕೀಲರs, ನಿಮ್ಮಂಥ ತಿಳಿದವರs ಹೀಂಗ ಕೇಳಿದರ ನಾ ಏನ್ಹೇಳ್ಲೀ?

**ವಕೀಲ:**– ಬಾಯಿಬಿಟ್ಟು ಹೇಳೋ!

**ಸೆಕ್ರೆಟರಿ:**– ಏನೂ ಇಲ್ರೀ! ಅವರೆಲ್ಲಾದರ್ೂ ಪರಿಚಯ ಆಗಿಬಿಟ್ರೆ ಅವರ ಕಡಿಂದಾ ರಾಷ್ಟ್ರೀಯ ರಕ್ಷಣಾ ನಿಧೀಗೆಂತ ನಾಟಕಾ ಆಡಿಸಬೇಕೂಂತ.

**ವಕೀಲ:**– ಆಡ್ಡೀ ಇಲ್ಲಾ, ಒಳ್ಳೇ ವಿಚಾರ.

**ಚಂದ್ರಶೇಖರ:**– ಯಾಕ, ಮೊನ್ನೆ ಎತ್ತಿಹಾಕಿದ ಹತ್ತು ಸಾವಿರ ರೂಪಾಯಿ ಎರಡು ನೂರು ತೊಲಿ ಬಂಗಾರಾ ಕರಗಿಹೋಗಿಬಿಟ್ಟವೇನು?

**ಸೆಕ್ರೆಟರಿ:**– ಅದು ಯಾವದಪಾ?

**ವಕೀಲ:**– ಸೆಕ್ರೆಟರಿ! ಚಂದ್ರೂನ ಕೂದ ಮತ್ತ ರಮಾಕಾಂತನ ಕೂಡ ಸ್ವಲ್ಪ ಹುಷಾರೀಲೆ ಮಾತಾಡಪಾ, ಇವರಿಗೆ ಗೊತ್ತಿಲ್ಲದ ವಿಷಯಾನs ಇಲ್ಲಾ!

**ಸೆಕ್ರೆಟರಿ:**– ತಿಳೀವಲ್ದ್ಯಾಕ ಬಿಡ್ರೀ, ನಾವs ಅಂಥಾದರೊಳಗಿಲ್ಲಂದಾಗ ಯಾರೇನಂದ್ರು ನನಗೇನಾಗಬೇಕಾಗೇದ ?

**ಚಂದ್ರಶೇಖರ:**– ಬಾಯಿ ಮುಚ್ಚಪಾ ಸೆಕ್ರೆಟರಿ! ನಿನ್ನಾಲಿಗೆ ಎಷ್ಟು ತೊಲಿ ಬಂಗಾರಾ ಮತ್ತ ಎಷ್ಟು ರೂಪಾಯಿ ಬಂದಾವನ್ನೂದನ್ನ ಹೇಳ್ಲೇನು?

**ಸೆಕ್ರೆಟರಿ:**– ಅಂದ್ರುs, ನಿನಗ ಎಲ್ಲಾ ಗೊತ್ತೈತೀ ಅಂಥಂಗಾತಲ್ಲಾ!

**ವಕೀಲ:**– ಆಗಳೇ ನಾನಂ ಕನ್ನಡದೊಳಗs ಹೇಳಿದ್ನೆಲ್ಲೋ?

**ಸೆಕ್ರೆಟರಿ:**– ಹೇಳಿದ್ರಿ ವಕೀಲರ ! ಆದರ ಇವರಿಗೆ ಇಷ್ಟೆಲ್ಲಾ ತಿಳಿದಿರಬಹು ದಂತ ನನಗ ಅನಿಸಿದ್ದಿಲ್ಲಾ !

**ಚಂದ್ರಶೇಖರ:**– ಹಾಂಗೆಲ್ಲಾ ತಿಳಕೋಬ್ಯಾಡಪಾ ! ನಿಮ್ಮಂಥಾ ಕಳ್ಳರ ಕಣ್ಣೊಳಗ ನಾವು ಹುಡುಗರಾಗಿರಬಹುದು. ಆದರ ನಾವು ಈಗ ಸಂಗ್ರ ಹಿಸಿದ ಸುದ್ದಿಗಳನ್ನ ಬಯಲಿಗೆ ಹಾಕಿದರ ಈ ಊರೊಳಗಿನ ಮುಖಂಡರು ಎಮ್ಮೆಲ್ಲೆಗಳು ವಿಷಾ ಕುಡದು ಸಾಯಬೇಕಾಗ್ತದ. ತಿಳೀತೇನು ?

**ಸೆಕ್ರೆಟರಿ:**– ತಿಳೀತಪಾ, ತಿಳೀತು. ಆದರ ನೀನು ನನ್ನ ಬಗ್ಗೆ ತಪ್ಪು ತಿಳಿಕೋ ಬ್ಯಾಡಪಾ ?

**ಚಂದ್ರಶೇಖರ:**– ನಾವು ಯಾರ ಬಗ್ಗೇನೂ ತಪ್ಪು ತಿಳಕೊಳ್ಳೂದಿಲ್ಲ. ತಿಳಿ ತಿಲ್ಲೋ ? ನೀನು ಯಾವ ಯಾವ ಪ್ರಸಂಗದೊಳಗ ಎಷ್ಟೆಷ್ಟು ಹಣಾ ಎತ್ತಿ ಹಾಕೀದಿ ಅನ್ನೂದು ನಮಗ ಗೊತ್ತದ.

**ಸೆಕ್ರೆಟರಿ:**– ನೋಡಪಾ, ನಾನೇನು ತಿಂದಿಲ್ಲಾಂತಲ್ಲ. ಆದರ ದೇವರಾಣೇಂದ್ರೂ ಅವರಷ್ಟು ತಿಂದಿಲ್ಲಪಾ !

**ವಕೀಲ:**– ಎಷ್ಟರಾ ತಿಂದೀದೆಲ್ಲಾ ?

**ಸೆಕ್ರೆಟರಿ:**– ಎಂಥಾ ಮಾತ್ರೀ ವಕೀಲರ ! ಇದ್ಲೀ ದಲಾಲೀ ಮಾಡೂವಾಗ ಕೈಗೆ ಮಸಿ ಹಚಗೊಳ್ಳದಿದ್ರ ಹ್ಯಾಂಗಾಗತದರಿ !

**ವಕೀಲ:**— ಹೌದಪಾ ! ಹಚಗೋಬೇಕಾಗತದ.

**ಸೆಕ್ರೆಟರಿ:**— ಅದು ಹೋಗಲಿಬಿಡಿರಿ. ನಾನು ಹೇಳಿದ ವಿಚಾರಾ ಏನ ಮಾಡಿದಿರಿ ?

**ವಕೀಲ:**— ಯಾವದಪಾ ಅದು ?

**ಸೆಕ್ರೆಟರಿ:**– ಅದೇ ನಾಟಕದವರಿಂದ ರಾಷ್ಟ್ರೀಯ ರಕ್ಷಣಾ ನಿಧಿಗಾಗಿ ನಾಟಕ ಗಳನ್ನಾಡಿಸುವದು

**ಚಂದ್ರಶೇಖರ:**— ನಿನ್ನ ಯೋಜನೆ ಒಳ್ಳೆಯದೇ; ಆದರೆ ಈಗ ನಾಟಕದವ ರನ್ನು ಹಿಡಿದರೆ ದುಡ್ಡಾಗತದ ಅನ್ನೂದನ್ನ ನಾ ನಂಬಲಾರೆ

**ಸೆಕ್ರೆಟರಿ:**– ಯಾಕಪಾ ?

**ಚಂದ್ರಶೇಖರ:**– ಯಾಕಂತ ಕೇಳ್ತೀಯಲ್ಲೋ ? ಏಲೀಕಡೇ ಫುಕ್ಕಟ ನಾಟಕಾ ನೋಡವರs ಹೆಚ್ಚಾಗಿ ಬಿಟ್ಟಾರ. ಕೆಲ ಶ್ರೀಮಂತರಂತೂ

ದುಡ್ಡು ಕೊಟ್ಟು ನಾಟಕಾ ನೋಡೂದು ಅಪಮಾನಾಂತ ತಿಳ್ಕೊಂತಾರ ಇಂಥಾದರಾಗ ನೀವು ನಾಟಕದವರಿಂದ ನಿಧಿ ಸಂಗ್ರಹಿಸುವದು ಎಷ್ಟರ ಮಟ್ಟಿಗೆ ಸಾಧ್ಯಾ, ಅಂತ ?

ವಕೀಲ:- ನೀ ಹೇಳೂದು ಖರೇ, ಆದರ ಕೆಲವು ಜನ ಶ್ರೀಮಂತರು ಕಲಾಭಿಮಾನಿಗಳೂ ಇದ್ದಾರ ಕಲಾವಿದರಿಗಾಗಿ ಮುಕ್ತ ಹಸ್ತದಿಂದ ಸಹಾಯ ಮಾಡುವರೂ ಇದ್ದಾರ.

ಚಂದ್ರಶೇಖರ:- ಅದು ನನಗೂ ಗೊತ್ತದರೀ ವಕೀಲರ! ಆದರ ಅಂಥವರು ಭಾಳ ಕಡಿಮಿ. ಆದರ ಫುಕ್ಕಟ ನೋಡಬೇಕನ್ನವರ ಭಾಳ ಮಂದಿ

ಸೆಕ್ರೆಟರಿ;- ಅದೇನs ಆಗಲ್ರೀ ವಕೀಲರ! ನಾಟಕದವರ ವಿಚಾರಾ ಮರೀ ಬ್ಯಾಡ್ರಿ.

ವಕೀಲ;— ಆಗಲೆಪಾ ಪರಿಚಯ ಮಾಡಿಸಿಕೊಡ್ತೀನಿ ಮುಂದ, ನಿನಗ ತಿಳಿಧಂಗ ಮಾಡಿಕೋ.

ಸೆಕ್ರೆಟರಿ;— ಅಷ್ಟ ಮಾಡಿಬಡ್ರಿ. ಮುಂದಿಂದು ನಾ ನೋಡಿಕೊಂತೀನಿ,

ಚಂದ್ರಶೇಖರ:- ಅಂತೂ ಸೆಕ್ರೆಟರಿಯವರಿಗೆ ಅನ್ನದ ದಾರಿ ಮಾಡಿಕೊಟ್ರೆಲ್ಲ ವಕೀಲರs ! ( ಅದೇ ಸಮಯಕ್ಕೆ ರಮಾಕಾಂತನು ಪ್ರವೇಶಿಸಿ)

ರಮಾಕಾಂತ;— ವಕೀಲರು ಮತ್ಯಾರಿಗೆ ಅನ್ನದ ದಾರಿ ಮಾಡಿ ಕೊಟ್ರೆಪಾ!

ಚಂದ್ರಶೇಖರ:- ಸೆಕ್ರೆಟರಿಗೆ ಮತ್ತಿನ್ಯಾರಿಗೆ ?

ರಮಾಕಾಂತಃ- ಅವರದೇನು ?

ಚಂದ್ರಶೇಖರ:- ಈಗಿವರು ರಾಷ್ಟ್ರೀಯ ರಕ್ಷಣಾ ನಿಧಿಯ ಸಂಗ್ರಹಕ್ಕಾಗಿ ಸಿದ್ಧರಾಗ್ಯಾರ. ಅದಕ್ಕ ನಾಟಕಕಂಪ್ನೀಯವರ್ನ ಹಿಡೀತಾರಂತ

ರಮಾಕಾಂತ:- ಅಡ್ಡಿಯಿಲ್ಲಾ. ಏಕಾದಶೀ ಮನೀಗೆ ಶಿವರಾತ್ರಿ ಹೋದಂಗಾ ಗತಪ ಅಷ್ಟ.

ವಕೀಲ:— ಹೋಗಲಿ ಬಿಡು ರಮಾಕಾಂತಾ ನಿನಗೊಂದು ಸಂತೋಷದ ಸುದ್ದೀ ತಿಳಿಸಬೇಕಾಗೇದಪಾ !

ರಮಾಕಾಂತ:- ಅಂಥಾದೇನರೀ ವಕೀಲರ !

ವಕೀಲ:— ಮೊನ್ನೆನೀನು ಒಂದು ಒಳ್ಳೇ ಕ್ಯಾಮರಾ ಮತ್ತಟೇಪ ರಿಕಾರ್ಡರ ಬೇಕೂ ಅಂತಿದ್ದೆಲ್ಲಾ .

ರಮಾಕಾಂತ:– ಹೌದು.

ವಕೀಲ:– ನಿನ್ನೆ ನನ್ನ ಗೆಳೆಯರೊಬ್ರು ಜರ್ಮನೀಗೆ ಹೋದ್ರು ಅಲ್ಲಿಂದ ಬರೂವಾಗ ಒಂದು ಛಲೋ ಕ್ಯಾಮರಾ ಮತ್ತು ಟೇಪ ರಿಕಾರ್ಡರ ತೊಗೊಂಡು ಬಾ ಅಂತ ಹೇಳೀನಿ ಛಾಳಾದರ ಇನ್ನೆರಡು ತಿಂಗಳೊಳಗ ಅವರು ವಾಪಸ್ ಬರ್ತಾರ.

ಸೆಕ್ರೆಟರಿ:– ಅವ್ಯಾತಕ್ಕರೀ ವಕೀಲರ ?

ಚಂದ್ರಶೇಖರ:– ಬೇಕಲ್ಲಪಾ ನಿಮ್ಮಂಥವರ ಹಲಕಟ್‌ಗಿರಿ ಬಯಲಿಗ್ಹಾಕಾಕ.

ಸೆಕ್ರೆಟರಿ:– ಅಂದ್ರ ?

ಚಂದ್ರಶೇಖರ:– ಅಂದ್ರೇನೋ ? ನೀವು ಮಾತಾಡಿದ್ದನ್ನ ಟೇಪ್ ಮಾಡಿಕೊಳ್ಳೂದು ಸಾಧ್ಯಾದರ ಅಂಥಾ ಸನ್ನಿವೇಶಗಳ ಫೋಟೋ ತಕೊಳ್ಳೂದು. ಅದರ ಸಲುವಾಗೇ ಅವನ್ನ ತರಸಬೇಕಾತು. ತಿಳೀತಿಲ್ಲೋ ?

ಸೆಕ್ರೆಟರಿ:— ತಿಳೀತಪಾ, (ಅದೇ ಸಮಯಕ್ಕೆ ಒಂದು ಹುಡುಗನು ಓಡುತ್ತ ಬಂದು ರಮಾಕಾಂತನ ಕೈಯಲ್ಲಿ ಒಂದು ಚೀಟಿಯನ್ನು ಕೊಡುವನು. ರಮಾಕಾಂತನು ಆ ಚೀಟಿಯನ್ನೋದಿ ಮುಖ ಚಿಕ್ಕದು ಮಾಡುವನು)

ಚಂದ್ರಶೇಖರ:– ಯಾರದಪಾ ಅದು ?

ರಮಾಕಾಂತ:– ಪ್ರಮೀಲಾಂದು.

ಚಂದ್ರಶೇಖರ:– ಅಂಥಾದೇನ ಬರದಾಳ, ಓದಿದ ಕೂಡಲೆ ಮುಖ ಚಿಕ್ಕದು ಮಾಡಿಬಿಟ್ಟೆಲ್ಲಾ !

ರಮಾಕಾಂತ:— ವಿಷಾಯಾನ ಅಂಥಾದದ್ಪಾ.

ಚಂದ್ರಶೇಖರ:— ಏನದು ?

ರಮಾಕಾಂತ:— ನೀನs ಓದು. (ಎಂದು ನುಡಿದು ಚಂದ್ರಶೇಖರನಿಗೆ ಚೀಟಿಯನ್ನು ಕೊಡುವನು)

ಚಂದ್ರಶೇಖರ:– (ಓದುತ್ತ) ಅಣ್ಣಾ ! ನೀನು ತಕ್ಷಣ ಚಂದ್ರಣ್ಣನನ್ನು ಕರೆದುಕೊಂಡು ಬಾ, ಸಾಧ್ಯವಾದರೆ ವಕೀಲರನ್ನೂ ಕರೆದುಕೊಂಡು ಬಾ. ಏಕೆಂದರೆ ಅರುಂಧತಿಯ ಮನೆಯಲ್ಲಿ ಭಯಂಕರ ಅನಾಹುತವಾಗಿದೆ.

ಅಂದರೆ ಈಶ್ವರರಾಯರು ಬಲವಂತದಿಂದ ಸುವರ್ಣಾಳ ಮದುವೆಯನು ತನ್ನ ತಮ್ಮನೊಂದಿಗೆ ಗುಡಿಯೊಳಗೆ ಅರ್ಧ ತಾಸಿನಲ್ಲಿ ಮಾಡಿ ಮುಗಿಸಿದ್ದಾನೆ. ಅದೇ ಸಮಯದಲ್ಲಿ ಅಂದರೆ ಗುಡಿಯೊಳಗೆ ಸುವರ್ಣಾಳ ಮದುವೆಯಾಗುತ್ತಿರುವಾಗ ಅವರ ಮನೆಯೊಳಗೆ ಶಿವೋತ್ತಮರಾಯರು ಅರುಂಧತಿಯ ಮೇಲೆ ಬಲಾತ್ಕಾರ ಮಾಡಿದರಂತೆ, ಅದಕ್ಕಾಗಿ ಅವಳು ಆತ್ಮಹತ್ಯ ಮಾಡಿಕೊಂಡಿದ್ದಾಳೆ ಅಣ್ಣಾ! ಆಕೆಯನ್ನು ರಕ್ಷಿಸಬೇಕೆಂದು ನಾವು ಪಣತೊಟ್ಟದ್ದು ನಿರರ್ಥಕವಾಯಿತಣ್ಣಾ. ಆಕೆಯ ಅಂತ್ಯ ಸಂಸ್ಕಾರಕ್ಕೆ ಬೇಗ ಬಾ.

ನಿನ್ನ ತಂಗಿ
—ಪ್ರಮೀಲಾ

**ವಕೀಲ:**— ಅಂತೂ ಅರುಂಧತಿಯು ದುರ್ಮರಣಕ್ಕೀಡಾಗಬೇಕಾಯಿತು.

**ರಮಾಕಾಂತ:**— ಹಾಗಾದದ್ದು ಒಂದು ರೀತಿಯಿಂದ ಒಳ್ಳೇದಾಯ್ತು.

**ವಕೀಲ:**— ಯಾಕ ?

**ರಮಾಕಾಂತ:**— ಜೀವದಿಂದ ಇರೂವಾಗರಾ ಆಕಿಗೇನು ಸುಖಾ ಇತ್ತು. ದಿನಾ ಸಾಯುವದಕ್ಕಿಂತ ಒಮ್ಮೆ ಸತ್ತು ಹೋದದ್ದು ಛಲೋ ಅಲ್ಲೇನು ?

**ವಕೀಲ:**— ಅದೇನಸ ಇರ್ಲಿ ರಮಾಕಾಂತಾ ? ಈ ಪ್ರಕರಣದೊಳಗ ಈಶ್ವರರಾಯರ್ನ ಶಿವೋತ್ತಮರಾಯರ್ನ ಬಿಡಬಾರ್ದು. ಕಾಯ್ದೆಶೀರ ಅವರ ಮ್ಯಾಲ ಕೇಸ ಹಾಕಸೋಣು.

**ರಮಾಕಾಂತ;**— ಅದನ್ನ ಆ ಮ್ಯಾಲ ವಿಚಾರ ಮಾಡೂಣಂತ ಮೊದಲ ಅವರ ಮನೀಗೆ ಹೋಗುಣು ನಡೀರಿ.

## ದೃಶ್ಯ ೧೨. ಸ್ಮಶಾನ

ಅರುಂಧತಿಯ ಅಂತ್ಯಕ್ರಿಯ ಮುಗಿದಿದೆ. ಶ್ರೀ ಶಿವೋತ್ತಮರಾಯ, ಡಾಕ್ಟರ, ವಕೀಲ, ಸೆಕ್ರೆಟರಿ, ರಮಾಕಾಂತ, ಚಂದ್ರಶೇಖರ, ಪ್ರಮೀಲಾ,

ಗಂಗೂಬಾಯಿ, ಹಾಗು ಸುವರ್ಣಾ ಇವರೆಲ್ಲರೂ ನಿಂತುಕೊಂಡಿದ್ದಾರೆ ಯಾರ ಮುಖದ ಮೇಲೆಯೂ ಕಳೆಯಿಲ್ಲ. ಯಾರೊಬ್ಬರು ಮಾತಾಡದೆ ಸುಮ್ಮನೆ ನಿಂತುಕೊಂಡಿದ್ದಾರೆ. ಆಗ…………

ರಮಾಕಾಂತ:– ಈಗೆಲ್ಲರಿಗೂ ಥಣ್ಣಗಾಗಿರಬೇಕಲ್ಲ ? ಯಾಕ್ರೀ ಈಶ್ವರರಾಯರ ? ಇವತ್ತು ನಿಮ್ಮ ಜಾತಿ ಉದ್ಧಾರಾಧಾಂಗಾತು. ಅಲ್ಲ? ಅಲ್ರೀನಿಮ್ತಮ್ಮನ ಮೊದಲನೇ ಹೆಣ್ತಿ ಯಾವ ಜಾತೀಯಾಕಿ ? ಆಕೀನ್ನನಿಮ್ತಮ್ಮ ಮದ್ವಿ ಮಾಡಿಕೊಂಡ್ರ ನಿಮ್ಮ ಜಾತಿ ಕೆಡ್ಲಿಲ್ಲ. ಅರುಂಧತಿ ಮಾಡಿಕೊಂಡ್ರ ಕೆಟ್ಹೋಗತಿತ್ತಲ್ಲ. ? ಅದು ಹೋಗಲಿ. ಅರುಂಧತಿದಂತೂ ಮುಗಧೋತು. ಮತ್ತೊಂದು ಮದುವೀ ಮಾಡಿ ಸುವರ್ಣಾನ್ನೂ ಕೊಂದು ಬಿಡ್ತೀರಿ. ನೀವು ಪಶು ಆಗಿ ಹುಟ್ಬಬೇಕಾಗಿತ್ತು. ತಪ್ಪಿ ಮನುಷ್ಯರ ಹೊಟ್ಯಾಗ್ಹುಟ್ಟೀರಿ.

ಶಿವೋತ್ತಮರಾಯರ ! ನೀವು ಜನತಾ ಪ್ರತಿನಿಧಿಗಳಲ್ಲ ! ಎಮ್ಮೆಲ್ಲೆಗಳು ನೀವು. ಏನು ಮಾಡಿದರೂ ಮುಚಿಗೊಳ್ಳೋ ಧೈರ್ಯ ಅದs ಅಲ್ಲ ನಿಮಗ ! ಈಗ ಅರುಂಧತಿನ್ನ ಕೊಂದಿಟ್ರಿಲ್ಲಾ, ಆಕೀ ಪ್ರಾಣಾ ವಾಪಸ್ ತರಷೋ ಯೋಗ್ಯತಾ ಅದs ಏನ್ರೀ ನಿಮಗ ? ಈ ಕೇಸಿನ್ಯಾಗ ನಿಮ್ಮನ್ನ ಹತ್ತೋರ್ಷ ಜೇಲಿಗೆ ಕಳಿಸಬಹುದು. ನಿಮ್ಮಂಥಾ ಪಾಪಿಗಳು ಜೇಲಿನೊಳಗ ಸತ್ಹೋದರ ಛಲೋ ಅಲ್ಲಾ ಇಲ್ಲೇ ಊರಾಗ ಕಂಡವರೆಲ್ಲಾ ನಿಮಗ ಉಗಳಲಿ. ಮುಂದೀ ಕೂಡ ದಿವಸ ಉಗಳಿಸಿಕೊಳ್ಳಲೀ ಅಂತ ಸುಮ್ನ ಬಿಡ್ತೀನಿ.

ಡಾಕ್ಟರ ! ನಿಮ್ಮಂಥಾ ತಾಯಿಗ್ಗಂಡರಂತೂ ಜಗತ್ತಿನೊಳಗ ಯಾರೂ ಇರಲಿಕ್ಕಿಲ್ಲ. ಅಲ್ರೀ ಡಾಕ್ಟರು ಅಂದ್ರ ಜಗತ್ತಿನ ತಂದೀ ತಾಯೀ ಇದ್ಹಾಂಗ ತಂದೀತಾಯಿಗಳೆ ಮುಂದ ಹೇಳದಂಥಾ ವಿಷಯಾನ

ನಿಮ್ಮಿಂದ ಹೇಳ್ತಾರ. ಅಂಥಾ ಪವಿತ್ರ ಕೆಲಸದು. ಅಂಥಾ ಪವಿತ್ರ ಕೆಲಸ ಕೈಕೊಂಡ ನೀವು ಎಷ್ಟು ಹೊಲಸು ಕೆಲಸಾ ಮಾಡತೀರಲ್ರೀ? ಖರೇ ಹೇಳಬೇಕಂದ್ರ ನಿಮ್ಮಲ್ಲಿ ಮನುಷ್ಯತ್ವ ಇದ್ರ ಉರ್ಲು ಹಾಕ್ಕೊಂಡು ಸತ್ತು ಹೋಗಬೇಕರಪಾ. ಥೂ ಈ ರೀತಿ ಭಂಡಬಾಳು ಬದುಕಬಾರದು.

ಗಂಗೂಬಾಯಿಯವರೇ! ಈಗ ನಿಮಗ ಸಮಾಧಾನಾಗಿರಬೇಕಲ್ಲ! ನಿಂಹರಿಸ್ಥಿತಿ ಹ್ಯಾಂಗಿತ್ತೂ ಅನ್ನೂದು ನನಗ ಗೊತ್ತದ! ಆದರ ಅಣ್ಣಾ ಅಂತ ತಿಳಿದು ಅಲ್ಲಾ ಏನು ಮಾಡಿದ್ರೂ ಮುಚಿಗೊಂಡು ಬಿಟ್ಲ್ಲಾ ಹೊಟ್ಯಾಗ ಹುಟ್ಟಿದ ಮಗಳಿಗಿಂತ ಈ ಪಂಡ ಅಣ್ಣಾನs ಬೇಕಾತ್ರಲ್ಲ. ನಿಮಗ? ಬಹುತೇಕ ಈಗ ಎಲ್ಲರಿಗೂ ಸಮಾಧಾನಾಗಿರಬೇಕು.

ನಾನು ಹೀಂಗೆಲ್ಲ ಹೇಳೂದು ನನ್ನ ಸ್ವಾರ್ಥಕ್ಕಲ್ಲ. ನೀವೂ ನನ್ನ ಬಳಗದವರs. ನಿಮಗ ಬುದ್ಧಿದ್ರೂ ಇಂಥಾ ಅಡ್ಡದಾರೀ ಹಿಡೀತೀರಲ್ಲಾಂತ ನನಗ ಕೆಡಕನಿಸಿ ಮಾತಾಡಬೇಕಾತು. ನೀವು ಇಂಥಾ ಕೆಲಸಕ್ಕ ಬೀಳೂದರ ಬದ್ಲು ನಾಡಿಗೆ, ರಾಷ್ಟ್ರಕ್ಕ ಕಲ್ಯಾಣಾಗೂವಂತ ಕೆಲಸ ಮಾಡ್ರಿ ಂತ ಹೇಳ್ತೇನಿ ಈ ವರೆಗೆ ಆದದ್ದಾಗಿ ಹೋತು. ಇನ್ಮುಂದಾದರೂ ಒಳ್ಳೇ ರೀತೀಲೆ ನಡಿಯೂದು ಕಲೀರಿ. ದೇಶಕ್ಕ ಒಳ್ಳೇದಾಗೋ ಕೆಲಸಾನ ಇನ್ನ ಮ್ಯಾಲ್ ಮಾಡ್ತೇವಿ ಅಂತ ಪ್ರತಿಜ್ಞೆ ಮಾಡಿ ರಾಷ್ಟ್ರಗೀತಾ ಹಾಡಿರಿ.

ಜನಗಣಮನ ಅಧಿನಾಯಕ ಜಯಹೇ
ಭಾರತ ಭಾಗ್ಯವಿಧಾತ।
ಪಂಜಾಬ ಸಿಂಧು ಗುಜರಾಥ ಮರಾಠಾ
ದ್ರಾವಿಡ ಉತ್ಕಲ ವಂಗ।
ವಿಂಧ್ಯ ಹಿಮಾಚಲ ಯಮುನಾ ಗಂಗಾ
ಉಚ್ಛಲ ಜಲಧಿತರಂಗ।

ತವ ಶುಭ ನಾಮೆ ಜಾಗೆ
ತವ ಶುಭ ಆಶಿಷ ಮಾಗೆ
ಗಾಹೇ ತವ ಜಯಗಾಥಾ |
ಜನಗಣ ಮಂಗಲದಾಯಕ ಜಯ ಹೇ!
ಭಾರತ ಭಾಗ್ಯವಿಧಾತಾ |
ಜಯಹೇ ಜಯಹೇ ಜಯ ಜಯ ಜಯ ಜಯ ಹೇ

— ಸಮಾಪ್ತ —

ಇನ್ನೊಂದು ಕಾದಂಬರಿ....

‡‡ ಇದೇ ಶತಮಾನದ ಪ್ರಾರಂಭದಲ್ಲಿ ಸಂಸ್ಥಾನಿಕರ ದುರಾಡಳಿತಕ್ಕೆ ಬೇಸತ್ತು ಕ್ರಾಂತಿಯ ಕಹಳೆಯನ್ನೂದಿ........

‡‡ ಗೌಡರ, ಕುಲಕರ್ಣಿಗಳ ಹಾಗು ಪೋಲೀಸ್ ಅಧಿಕಾರಿಗಳ ರುಂಡ ಗಳನ್ನು ಚಂಡಾಡಿದ........

‡‡ ಶ್ರೀಮಂತರನ್ನು ಲೂಟಿ ಮಾಡಿ ಬಡವರಿಗೆ ಮುಕ್ತ ಹಸ್ತದಿಂದ ಹಂಚುತ್ತಿದ್ದ........

‡‡ ದ್ರೋಹಿಯೊಬ್ಬನ ಮೋಸಕ್ಕೆ ಬಲಿಯಾಗಿ ೧೫-೭-೧೯೨೨ ರಂದು ವಿಜಾಪುರ ಜಿಲ್ಲೆಯ ಬೀಳಗಿ ತಾಲೂಕಿನ ಸಿದ್ದಾಪುರದ ಬಳಿಯ ಗುಡ್ಡದಲ್ಲಿ ಪೋಲಿಸರ ಗುಂಡಿಗಾಹುತಿಯಾದ........

ಕರ್ನಾಟಕದ ರಾಬಿನ್‌ಹುಡ್

# ಸಿಂದೂರ ಲಕ್ಷ್ಮಣ (ಕಾದಂಬರಿ)

ಇದು

ಎಂ. ಜೀವನರ ಮತ್ತೊಂದು ಕೃತಿ

